# "ಹನಗಂಡಿ ದೇಸಗತಿ"

(ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧನಾ ವಿದ್ಯಾರ್ಥಿ

ಅಲಗೌಡ ಸಿ. ಪಾಟೀಲ

ಎಂ.ಎ. ಬಿ.ಇಡಿ

ಮಾರ್ಗದರ್ಶಕರು

ಡಾ॥ ಶ್ರೀಮತಿ. ಸ್ಮಿತಾ ಸುರೇಬಾನಕರ

ಎಂ.ಎ. ಪಿ.ಎಚ್.ಡಿ

ಮುಖ್ಯಸ್ಥರು ಇತಿಹಾಸ ವಿಭಾಗ

ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ ಬೆಳಗಾವಿ


ಚರಿತ್ರೆ ವಿಭಾಗ

ಶ್ರೀ. ಬಿ. ಆರ್. ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ ತಾ॥ ರಾಯಬಾಗ



ಚರಿತ್ರೆ ಅಧ್ಯಯನ ವಿಭಾಗ

---


ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೦೯

# "ಹನಗಂಡಿ ದೇಸಗತಿ"



(ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧನಾ ವಿದ್ಯಾರ್ಥಿ
ಅಲಗೌಡ ಸಿ. ಪಾಟೀಲ
ಎಂ.ಎ. ಬಿ.ಇಡಿ

ಮಾರ್ಗದರ್ಶಕರು
ಡಾ॥ ಶ್ರೀಮತಿ. ಸ್ಮಿತಾ ಸುರೇಬಾನಕರ
ಎಂ.ಎ. ಪಿ.ಎಚ್.ಡಿ
ಮುಖ್ಯಸ್ಥರು ಇತಿಹಾಸ ವಿಭಾಗ
ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ ಬೆಳಗಾವಿ



ಚರಿತ್ರೆ ವಿಭಾಗ
ಶ್ರೀ. ಬಿ. ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ ತಾ॥ ರಾಯಬಾಗ



ಚರಿತ್ರೆ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬
೨೦೦೯



ಹನಗಂಡಿಯ ದೇಸಾಯಿಗಳ ವಾಡೇಯ ಹೊರನೋಟ

# ಪ್ರಮಾಣ ಪತ್ರ

'ಹನಗಂಡಿ ದೇಸಗತಿ' ಎಂಬ ಶಿರ್ಷಿಕೆಯ ಸಂಪ್ರಬಂಧವನ್ನು ಡಾ॥ ಶ್ರೀಮತಿ. ಸ್ಮಿತಾ ಸುರೇಬಾನಕರ. ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿ ಶ್ರೀ. ಬಿ. ಆರ್. ದರೂರ. ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವದಿಲ್ಲ ಮತ್ತು ಈ ಪ್ರಬಂಧವನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೨೪-೦೯-೨೦೦೯

ಅಲಗೌಡ ಸಿ. ಪಾಟೀಲ
ಸಂಶೋಧನಾ ವಿದ್ಯಾರ್ಥಿ
ಶ್ರೀ. ಬಿ. ಆರ್. ದರೂರ.
ಸಂಶೋಧನಾ ಕೇಂದ್ರ ಹಾರೂಗೇರಿ.

# ದೃಢೀಕರಣ ಪತ್ರ

ಅಲಗೌಡ ಸಿ. ಪಾಟೀಲ. ಇವರು *ಹನಗಂಡಿ ದೇಸಗತಿ* ಎಂಬ ಶಿರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ. ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಈ ಮೊದಲು ಎಲ್ಲಿಯೂ ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೨೪-೦೯-೨೦೦೯

ಡಾ॥ ಶ್ರೀಮತಿ. ಸ್ಮಿತಾ ಸುರೇಬಾನಕರ
ಮಾರ್ಗದರ್ಶಕರು
ಶ್ರೀ. ಬಿ. ಆರ್. ದರೂರ
ಸಂಶೋಧನಾ ಕೇಂದ್ರ ಹಾರೂಗೇರಿ

# ಅರಿಕೆ

ಕುಡಚಿಯ ಬಿ. ಶಂಕರಾನಂದ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ಇತಿಹಾಸ ಉಪನ್ಯಾಸಕನಾಗಿ ಸೇವೆ ಸಲ್ಲಿಸುತ್ತಿರುವ ನಾನು ಸಂಶೋಧನಾ ಕ್ಷೇತ್ರದಿಂದ ದೂರ ಉಳಿದಿದ್ದೆ ಆದರೆ ಎಂ.ಫಿಲ್. ಮಾಡಬೇಕೆಂಬ ಬಯಕೆ ಉಳ್ಳವನಾಗಿದ್ದೆ. ಒಂದು ದಿನ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಶ್ರೀ. ಬಿ. ಆರ್. ದರೂರ. ಸಂಶೋಧನಾ ಕೇಂದ್ರ ಹಾರೂಗೇರಿ ಎಂ.ಫಿಲ್. ಪದವಿಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ ಎಂದು ನೋಡಿ ಎಂ.ಫಿಲ್. ಮಾಡಬೆಕೆಂಬ ಬಯಕೆ ಹೆಚ್ಚಾಯಿತು. ಅದರಂತೆ ಪ್ರವೇಶವು ಸಿಕ್ಕಿತು. ಡಾ॥ ವಿ. ಎಸ್. ಮಾಳಿ ಯವರು ನನಗೆ ಪ್ರತಿಯೊಂದಕ್ಕೂ ಮಾರ್ಗದರ್ಶನ ಮಾಡಿದರು. ಹಾಗೂ ಮಾರ್ಗದರ್ಶಕರಾಗಿ ಡಾ॥ ಶ್ರೀಮತಿ. ಸ್ಮಿತಾ ಸುರೇಬಾನಕರ ಇವರು ಪ್ರತೀ ಹಂತದಲ್ಲಿಯೂ ಮಾರ್ಗದರ್ಶನ ನೀಡಿದರು. ಇವರಿರ್ವರಿಗೂ ನಾನು ಎಂದೆಂದಿಗೂ ಚಿರಋಣಿಯಾಗಿರುವೆ.

ಡಾ॥ ಚಿಲಮಿ ಸರ್, ವೃಷಭೇಂದ್ರ ಕಾಲೇಜಿನ ಗ್ರಂಥಪಾಲಕರಾದ ಸಾಲಿಮಠ, ಘಟ್ಟನಟ್ಟಿ ಡಾ॥ ಸಂಗಮೇಶ ಕಲ್ಯಾಣಿ, ಪ್ರೊ. ಶೋಭಾ ಕೊಕಟನೂರ, ಪ್ರೊ. ಸುರೇಖಾ ಬೆಳಗಲಿ, ಪ್ರೊ. ಆರ್. ಎಸ್. ಗುಡೋಡಗಿ, ಪ್ರೊ. ವಿ. ಎಲ್. ನಾಡಗೌಡ, ಪ್ರೊ. ಎ. ಕೆ. ಹಾಜವಗೋಳ, ಪ್ರೊ. ಆರ್. ಎಮ್. ಕಾಂಬಳೆ, ಕುಮಾರಿ. ಮಂಗಲ ಕರ್ಲಟ್ಟಿ, ಶ್ರೀ. ಎಲ್. ಎಸ್. ಚೌರಿ, ಶ್ರೀ. ಎ. ಕೆ. ಯಲ್ಲಟ್ಟಿ, ಶ್ರೀ. ಸಂಜು ಪಾಟೀಲ. ನಮ್ಮ ಮಹಾವಿದ್ಯಾಲಯದ ಪ್ರಾಚಾರ್ಯರಾದ ಶ್ರೀಮತಿ. ಜೆ. ಎಲ್. ಭಾಟಿ. ಹಾಗೂ ನಮ್ಮ ಸಂಸ್ಥೆಯ ಕಾರ್ಯದರ್ಶಿ ಶ್ರೀ. ಎಸ್. ಆರ್. ಕುಸನಾಳೆ, ಅಧ್ಯಕ್ಷರಾದ ಶ್ರೀ. ಮಧು ಬಾಬರ ಹಾಗೂ ಸಿಬ್ಬಂದಿ ವರ್ಗದವರನ್ನು ಸದಾಕಾಲ ಸ್ಮರಿಸುವೇನು. ಅಚ್ಚುಕಟ್ಟಾಗಿ ಡಿಟಿಪಿ ಮಾಡಿದ ಶ್ರೀಮತಿ. ಜಯಪ್ರಭಾ ಪ್ರದೀಪ ಆಳಪ್ಪನವರ ಅವರಿಗೂ ವಂದನೆಗಳು.

ದಿನಾಂಕ : ೨೪-೦೯-೨೦೦೯

ಅಲಗೌಡ ಎಸ್. ಪಾಟೀಲ
ಬಿ. ಶಂಕರಾನಂದ ಪದವಿ ಪೂರ್ವ ಮಹಾವಿದ್ಯಾಲಯ
ಕುಡಚಿ. ಜಿ॥ ಬೆಳಗಾವಿ

# ಪರಿವಿಡಿ

ಅಧ್ಯಾಯ ೧

# ದೇಸಗತಿ ಪದದ ಅರ್ಥ – ವ್ಯಾಪ್ತಿ – ಉದ್ದೇಶ ಮತ್ತು ಅವಶ್ಯಕತೆ ಸ್ವರೂಪ – ಪೂರ್ವ ಪ್ರಯತ್ನಗಳ ಸಮೀಕ್ಷೆ

## ದೇಸಗತಿ ಪದದ ಅರ್ಥ

ಕರ್ನಾಟಕವನ್ನಾಳಿದ ಹಲವಾರು ರಾಜ ಮನೆತನಗಳಲ್ಲಿ ಪ್ರಮುಖವಾದಂತಹ ಶಾತವಾಹನರು, ಕದಂಬರು, ಗಂಗರು, ಬದಾಮಿಯ ಚಲುಕ್ಯರು, ಕಲ್ಯಾಣಿಯ ಚಲುಕ್ಯರು, ಮಾನ್ಯಖೇಟದ ರಾಷ್ಟ್ರಕೂಟರು, ಹೊಯ್ಸಳರು, ವಿಜಯ ನಗರದ ಅರಸರು, ಹಾಗೂ ಮೈಸೂರಿನ ಒಡೆಯರು ಪ್ರಮುಖರು, ಇವರೆಲ್ಲರೂ ಮಹಾಸಾಮ್ರಾಜ್ಯಗಳನ್ನೇನೋ ಸ್ಥಾಪಿಸಿ ಅಧಿಪತಿಗಳೆನಿಸಿಕೊಂಡರು. ಆದರೆ ಇವರ ಪೂರ್ವಜರೆಲ್ಲರೂ ಅನೇಕ ಚಿಕ್ಕ ಪುಟ್ಟ ಸಂಸ್ಥಾನಗಳನ್ನು ವಿಲೀನಗೊಳಿಸಿಕೊಂಡು ತಮ್ಮ ಆಧೀನದಲ್ಲಿ ಇಟ್ಟುಕೊಂಡು ಆಳ್ವಿಕೆ ಮಾಡಿರುವದು ಹಾಗೂ ಸಾಮ್ರಾಜ್ಯವನ್ನು ವಿಸ್ತರಿಸಿಕೊಂಡದ್ದು ನಮ್ಮ ಕರ್ನಾಟಕದ ಚರಿತ್ರೆಯ ಪುಟಗಳಲ್ಲಿ ಕಾಣಿಸುತ್ತದೆ. ಸೂಕ್ಷ್ಮವಾಗಿ ಪರಿಶೀಲಿಸಿದಾಗ ಈ ಸಾಮ್ರಾಜ್ಯಗಳ ನಿರ್ಮಾಣಕ್ಕೆ ಏಳಿಗೆಗೆ ಪರೋಕ್ಷವಾಗಿ ಶ್ರಮಿಸಿದ, ಹೊರಾಡಿದ ಅನೇಕ ಸಾಮಂತರು, ಪಾಳೆಗಾರರು ಮತ್ತು ಸಂಸ್ಥಾನಗಳ ದೇಸಗತಿಗಳ ಶ್ರಮ ಅನಾವರಣಗೊಳ್ಳುತ್ತದೆ. ಇದೇ ನಿಲುವಿನ ಹಿನ್ನಲೆಯಲ್ಲಿ ವಿಶ್ಲೇಷಿಸುತ್ತಾ ಹೋದಾಗ ನಮ್ಮ ಚರಿತ್ರೆಯ ಅಧ್ಯಯನ ಕೇವಲ ಸಾಮ್ರಾಜ್ಯಗಳ ಅದ್ಯಯನದಿಂದ ಮಾತ್ರ ಪೂರ್ಣಗೊಳ್ಳುವದಿಲ್ಲ, ಅದು ಸಂಸ್ಥಾನಗಳ ಆಧೀನರಾಗಿ ಕೇಲಸ ಮಾಡಿದವರೆಲ್ಲರ ಅಧ್ಯಯನದಿಂದ ಮಾತ್ರ ಸಾದ್ಯವಾಗುತ್ತದೆ ಎಂಬ ಸ್ಪಷ್ಟ ಧೋರಣೆ ಈ ನನ್ನ ದೇಸಗತಿ ಕುರಿತ ಪ್ರಸ್ತುತ ಅಧ್ಯಯನ ಪ್ರಬಂಧ ತಾಳಿದೆ.

ಸಾಮಂತರು ವಿಜಯನಗರ ಕಾಲಕ್ಕೆ ತಮ್ಮದೇ ಆದ ವಿಶಿಷ್ಟ ಕಾರ್ಯಗಳ ಮೂಲಕ ಆಳರಸರ ಅಡಿಯಲ್ಲಿ ಆಳ್ವಿಕೆ ನಡೆಸುತ್ತಿರುವದು ಕಂಡು ಬರುತ್ತದೆ. ಇವರು ರಾಜರ ಅಹ್ವಾನದ ಮೇರೆಗೆ ಯುದ್ಧದಲ್ಲಿ ಭಾಗವಹಿಸುತ್ತಿದ್ದರು. ಸಾಮಂತರು ರಾಜನಿಗೆ ಯುದ್ಧದಲ್ಲಿ ಗೆದ್ದ ಸಂಪತ್ತಿನಲ್ಲಿ ಅಧಿಕ ಪಾಲನ್ನು ನೀಡಬೇಕಾಗುತ್ತಿತ್ತು.

ಮಾಂಡಲಿಕರು ಸಾಮಂತರಿಗಿಂತಾ ಭಿನ್ನವಾದ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಇವರು ಸಂಪೂರ್ಣವಾಗಿ ರಾಜನ ಆಧೀನದಲ್ಲಿಯೇ ಕಾರ್ಯ ಪ್ರವರ್ತರಾಗಬೇಕಿತ್ತು. ಯುದ್ಧ ಇನ್ನಿತರ

ಕಾರ್ಯಗಳಲ್ಲಿ ರಾಜನ ಬೇಡಿಕೆಯಂತೆ ಸೈನಿಕರನ್ನು ಪೂರೈಸಿ, ರಾಜನ ಆಜ್ಞೆಗಳನ್ನು ಕಡ್ಡಾಯವಾಗಿ ಪಾಲಿಸಬೇಕಾಗುತ್ತಿತ್ತು.

ಪಾಳೆಗಾರರು ಉತ್ತರ ಕರ್ನಾಟಕದ ದೇಸಾಯಿಗಳಂತೆ, ದಕ್ಷಿಣ ಕರ್ನಾಟಕದಲ್ಲಿ ಇವರ ಪಾತ್ರ ಪ್ರಮುಖವಾಗಿದ್ದಂತೆ ಕಂಡು ಬರುತ್ತದೆ. ದೇಸಾಯಿಗಳಂತೆ ಪಾಳೆಗಾರರು ಸ್ವತಂತ್ರ ಆಡಳಿತಗಾರರಂತೆ ವರ್ತಿಸುತ್ತಿದ್ದರು ಬಹು ವಿಸ್ತಾರವಾದ ಭೂಮಿ ಆಸ್ತಿ–ಪಾಸ್ತಿಗಳನ್ನು ಹೊಂದಿದ್ದು, ಆ ಸ್ಥಳದ ಶಾಶ್ವತ ನಿವಾಸಿಗಳಾಗಿದ್ದರು. ಯುದ್ಧದ ಸಮಯದಲ್ಲಿ ಸ್ವಂತ ತಮ್ಮ ದಂಡವನ್ನೇ ಪ್ರತಿನಿಧಿಸುತಿದ್ದರು. (೧)

ದೇಸಗತಿಗಳು ಉತ್ತರ ಕರ್ನಾಟಕದ ಬಾಗಲಕೋಟ, ವಿಜಾಪೂರ, ಬೆಳಗಾವಿ, ಧಾರವಾಡ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ದೇಸಗತಿಗಳು ಸ್ಥಳಿಯ ಸರ್ಕಾರದ ಪ್ರತಿನಿಧಿಗಳಾಗಿದ್ದರು. ಇವರ ಆಳ್ವಿಕೆಯು ಸಾಮಂತ, ಮಾಂಡಲಿಕ, ಪಾಳೆಗಾರರ ನಂತರ ಬರುವ ಅಧಿಕಾರಿ ವರ್ಗವಾಗಿದೆ. ಇವರು ಆಳಿದ ಪ್ರದೇಶವನ್ನು 'ಪರಗಣ' ಎನ್ನಲಾಗುತಿತ್ತು. ಪರಗಣವು ಆಡಳಿತ ಸಮುದಾಯದ ಕೇಂದ್ರವಾಗಿತ್ತು. ಇದರ ಆಡಳಿತ ನೋಡಿಕೊಳ್ಳುತ್ತಿದ್ದವನೆ ದೇಸಾಯಿ. ಪರಗಣದಲ್ಲಿ ದೇಸಾಯಿ ವಾಸಿಸುತ್ತಿದ್ದ, ತನ್ನ ಹತೋಟಿಯಲ್ಲಿದ್ದ ಪ್ರದೇಶವನ್ನು ಅನೇಕ ಉಪವಿಭಾಗಗಳಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದರು.

ಅವು ಈ ಕೆಳಗಿನಂತಿವೆ.




ನಾಯಕ ಪಟ್ಟ ಧರಿಸಿದ್ದ ದೇಸಾಯಿಯರು ಸಮಾಜದ ಪ್ರಜಾ ಪಾಲಕರಾಗಿ, ದಂಡಿನ ನಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಇವರ ಮುಖ್ಯ ಕರ್ತವ್ಯಗಳೆಂದರೆ, ಕಂದಾಯ ವಸೂಲಿ ಸ್ಥಾನಿಕ ಸಮಸ್ಯೆಗಳನ್ನು ಬಗೆಹರಿಸುವದಾಗಿತ್ತು. ಸ್ಥಾನಿಕವಾಗಿ ದೇಸಾಯಿ, ದೇಸಮುಖ, ಶ್ರೀಮಂತ ಎಂಬ ಹೆಗ್ಗಳಿಕೆಗೆ ಇಂದಿಗೂ ಪಾತ್ರರಾಗಿದ್ದಾರೆ. ಜನಪ್ರತಿನಿಧಿಗಳಾಗಿ ಜನಾನುರಾಗಿಗಳಾಗಿದ್ದಾರೆ. ಒಟ್ಟಾರೆಯಾಗಿ ಈ ದೇಸಗತಿಗಳ ಮುಂದಿನ ನಡೆ ಅಧ್ಯಯನದ ಕೂತೂಹಲತೆಯನ್ನು ಹೆಚ್ಚಿಸುತ್ತದೆ.

## ದೇಸಗತಿ ಪದದ ಅರ್ಥ

ದೇಸಗತಿ ಎಂದರೆ ಪರಗಣ, ವತನ ಎಂದು ಕರೆಯುತ್ತಾರೆ. ಹಾಗೆಯೇ ಸಂಸ್ಥಾನಿಕರೆಂದು ಕೂಡಾ ಬಳಕೆಯಲ್ಲಿದೆ, ಆಡು ಭಾಷೆಯಲ್ಲಿ ದೇಸಗತಿ ಎಂಬ ಪದ ಬಳಕೆ ಯಾಗದಿದ್ದರೂ ಕೂಡಾ ವತನದಾರರೆಂದು ಕರೆಯುವದು ಬಹುಪಾಲು ರೂಢಿಯಲ್ಲಿದೆ. ಹಾಗಾಗಿ ಇವರನ್ನು ಇಲ್ಲಿ ದೇಸಗತಿಗಳೆಂದೇ ಉಲ್ಲೇಖಿಸಲಾಗುತ್ತಿದೆ.

ದೇಸಗತಿ ವತನದಾರರು ಬಹುಪರಗಣಗಳ ಯಜಮಾನಿಕೆಯ ವಾರಸುದಾರರಾಗಿದ್ದರು.

ಬಹು ಪರಗಣ ಸುಮಾರು ೨೦ ರಿಂದ ೫೦ ಹಳ್ಳಿಗಳ ಸಮೂಹವಾಗಿತ್ತು. ಇದರ ಮೇಲ್ವಿಚಾರಣೆಯನ್ನು ಆಡಳಿತದ ಹಕ್ಕನ್ನು ಸ್ಥಾನಿಕ ಒಡೆಯರಿಗೆ ವಹಿಸಿಕೊಟ್ಟವರು ದೇಸಗತಿಯವರಿಂದ ಎಂಬುದು ಬಹುಜನರ ಅಭಿಪ್ರಾಯವಾಗಿದೆ. ಇಂತಹ ದೇಸಗತಿಗಳ ಆಡಳಿತವನ್ನು ಸ್ಥಾನಿಕ ಒಡೆಯರೆನಿಸಿದ ದೇಸಾಯಿ, ದೇಶಪಾಂಡೆ, ನಾಡಗೌಡ, ಕುಲಕರ್ಣಿ, ನಾಡಿಗ, ನಾಡಿಗೇರ ಮಹಾರಾಷ್ಟ್ರದಲ್ಲಿ ಚೌಧರಿ, ಚೌಗುಲೆ ಎಂದು ಕರೆಯುತ್ತಿದ್ದ ವಾಡಿಕೆ ಇದೆ. ಈ ದೇಸಗತಿಯ ಮೂಲ ಪುರುಷರನ್ನು ಪರಗಣ ಇನಾಂದಾರರೆಂದು ಕರೆಯುವದುಂಟು.

ದೇಸಗತಿ ಪದವನ್ನು ವಿಭಜಿಸಿದಾಗ ಅದರ ಅರ್ಥವು ಭಿನ್ನ ಭಿನ್ನವಾಗಿ ಕಂಡು ಬರುತ್ತದೆ.

**ದೇಶಾಖತ್ > ದೇಶಗತ್ > ದೇಶಗತಿ > ದೇಸಗತಿ**

ಎಂಬ ವೈರುದ್ಧತೆ ಇರುವ ಪದಗಳು ನೋಡಲು ಕಂಡು ಬಂದರು, ಇವೆಲ್ಲವು ಮೂಲದಲ್ಲಿ ಒಂದೆ ಆಶಯವನ್ನು ಹೊಂದಿದೆ. ಈ ಪದಗಳನ್ನು ವಿಭಜಿಸಿದಾಗ

ದೇಶ – ದೇಸ – ದೇಶಿ ಎಂಬವುಗಳು ಕೂಡಾ ಒಂದೇ ಅರ್ಥವನ್ನು ಕೊಡುತ್ತವೆ. ಇವೆಲ್ಲದರ ಅರ್ಥದ ಹಿನ್ನಲೆಯನ್ನು ಗಮನಿಸಿದಾಗ ಸ್ಥಾನಿಕ, ಸ್ಥಳಿಕ, ಗ್ರಾಮಾಧಿಕ ಎಂಬುದರ ಮೂಲವನ್ನು ಇಲ್ಲಿ ಅರ್ಥೈಸಬಹುದು. 'ದೇಶ' ಎಂಬುದು ದ್ರಾವಿಡ ಭಾಷೆಯ ಮೂಲ ಪದವಾಗಿದೆ (೨). ಈ ಪದದ ಅರ್ಥದ ಜಾಡನ್ನು ಹಿಡಿದಾಗ ದೇಶದಲ್ಲಿ ಹುಟ್ಟಿದವ, ದೇಶದಲ್ಲಿ ವಾಸಿಸುವವ, ದೇಶದಲ್ಲಿ ಇರುವವ ಎಂಬುದಾಗಿ ತೋರುತ್ತದೆ.

'ದೇಸ್ ಎಂದರೆ ಸ್ಥಳ, ನಾಡು, ಪ್ರದೇಶ, ಸೀಮೆ ಎಂದಾಗುವದು.' (೩) ಹಾಗೇಯೇ ಗತ, ಖತ್, ಗತಿ ಎಂಬಂತಹ ಉತ್ತರ ಪದದ ಅರ್ಥವನ್ನು ಅವಲೋಕಿಸಿದಾಗ ಅದನ್ನು ಈ ರೀತಿ

ಗೃಹಿಸಬಹುದಾಗಿದೆ. ಹೊಂದು. ಒಳಪಡು ಎಂಬುದಾಗಿ ಪದದ ಮೂಲಾರ್ಥ ಕೂಡಾ ಧ್ವನಿಸುತ್ತದೆ. ಈಗಾಗಲೇ ದೇಸ್ ಪದವನ್ನು ಚರ್ಚಿಸಿದ್ದರು ಕೂಡ ಇನ್ನೂ ಅದರ ಒಳ ಹೂರಣವನ್ನು ಅಪೇಕ್ಷಣಿಯ ನೆಲೆಯಲ್ಲಿ ಗುರತಿಸಿದಾಗ ದೇಶ್ ಸಂಸ್ಕೃತ ಪದವಾದರೆ ದೇಸ್ ಎಂಬುದು ಅದರ ತದ್ಭವ ಪದವೆನಿಸಿದೆ, ದೇಶ್ ಪದದೊಡನೆ ಸೇರಿದ 'ಗತಿ' ಸಮೀಕರಿಸಿ ಹೇಳುವಲ್ಲಿ ದೇಶಗತಿ, ದೇಸಗತಿ ಎಂಬಂತಹ ಪದವಾಗಿ ರೂಪಗೊಂಡಿದೆ.

ಒಟ್ಟಾರೆಯಾಗಿ ಗೃಹಿಸುವದಾದರೆ ಈ ಎಲ್ಲ ಹೇಳಿಕೆಗಳು ವಿಮರ್ಶೆಯ ಪರಿಭಾಷೆಯಲ್ಲಿ ತಾತ್ಕಾಲಿಕವಾಗಿ ದೇಸ್‌ಗತಿಯನ್ನು ಉಲ್ಲೇಖಿಸುವಲ್ಲಿ ಸಹಕರಿಸುತ್ತವೆ.

## ಅಧ್ಯಾಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಜಮಖಂಡಿ ತಾಲೂಕಿನ 'ಹನಗಂಡಿ ದೇಸಗತಿ' ಎಂಬ ಶಿರ್ಷಿಕೆಯ ಅಡಿಯಲ್ಲಿ ಆಯ್ಕೆ ಮಾಡಿಕೊಂಡಿದ್ದೇನೆ. ಈ ಜಮಖಂಡಿ ತಾಲೂಕಿನಲ್ಲಿ ಕೊಣ್ಣೂರ ದೇಸಗತಿ ಒಂದಿದ್ದು, ಹಾಗೂ ಬಾಗಲಕೋಟ ಜಿಲ್ಲೆಯಲ್ಲಿ ಸುಮಾರು ದೇಸಗತಿಗಳು ಕಾಣಸಿಗುತ್ತವೆ. ಪ್ರಸ್ತುತ ಅಧ್ಯಯನಕ್ಕೆ ಕ್ಷೇತ್ರ ಕಾರ್ಯ ಕೈಕೊಂಡಾಗ ಬೇರೆ ಬೇರೆ ಜಹಾಗೀರದಾರರು ಇನಾಂದಾರರು ಕಾಣಸಿಗುತ್ತಾರೆ.

ಈ ತಾಲೂಕಿನಲ್ಲಿ ದೇಸಗತಿಗಳ ಹನಗಂಡಿ ದೇಸಾಯಿ ಎಂದೇ ಪರಿಚಿತರಾಗಿದ್ದಾರೆ. ಅಂತಹವರನ್ನು ಅಧ್ಯಯನಕ್ಕೆ ಅಳವಡಿಸಿಕೊಂಡು ಬಹು ನೆಲೆಯಲ್ಲಿ ಪ್ರಾಸ್ತಾವಿಕವಾಗಿ ದೇಸಗತಿ ಕೂಡಾ ಒಂದಾಗಿ ಕಂಡು ಬರುತ್ತದೆ. ಅದನ್ನು ಅಲಕ್ಷಿಸಬಾರದೆಂಬ ಆಶಯದೊಂದಿಗೆ ಸಂಕ್ಷಿಪ್ತವಾಗಿ ಇಲ್ಲಿ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸುತ್ತೇನೆ. ಈ ಎಲ್ಲಾ ಸಂಸ್ಥಾನಿಕರು (ಇನಾಂದಾರರು) ಸ್ವತಂತ್ರವಾಗಿ ಜನ ಸಮುದಾಯದೊಂದಿಗೆ ಬೆರೆತು ಸಾರ್ವಜನಿಕ ಹಿತಾಶಕ್ತಿ ಬಯಸುತ್ತಿರುವದರಿಂದ ಅವರನ್ನು ಕಡೆಗಣಿಸದೆ ಮೂಲ ದೇಸಗತಿಯೊಂದಿಗೆ ಸೇರಿಸಿಕೊಂಡು ಅಧ್ಯಯನಿಸಲಾಗಿದೆ.

ಒಟ್ಟಾರೆಯಾಗಿ ಗಮನಿಸುವದಾದರೆ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಹನಗಂಡಿ ದೇಸಗತಿ ಎಂಬುದು ಈ ಅಧ್ಯಯನ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

## ಅಧ್ಯಯನದ ಅವಶ್ಯಕತೆ

ಗತಿಸಿ ಹೋದ ಇತಿಹಾಸದ ತುಣುಕುಗಳು ಬಹುಕಾಲದ ನಂತರ ತಮ್ಮದೇ ಆದ ರೀತಿಯಲ್ಲಿ ಅಲಂಕರಿಸುತ್ತವೆ. ಅಂತಹ ಅಂಶಗಳು ದೊಡ್ಡದಿರಲಿ ಚಿಕ್ಕದಿರಲಿ ಅದು ವಿಶಿಷ್ಟ ಅರ್ಥ ಪೂರ್ಣವಾದುದೆ. ಸ್ವಾತಂತ್ರ್ಯ ಪೂರ್ವದಲ್ಲಿ ಆಚೀನ ಕರ್ನಾಟಕದಲ್ಲಿ ಆಡಳಿತವು ಬಹು ಬಿಗುವಿನಿಂದ ಕೂಡಿತ್ತು. ಅದು ಶ್ರಮ ಪೂರ್ಣ ಸಾಹಸಿ ಆಡಳಿತವೆಂದೇ ಭಾವಿಸಬೇಕಾಗುತ್ತದೆ. ಹನಗಂಡಿ ದೇಸಗತಿ ಭಾಗವು ಬಿಜಾಪೂರದ ಆದಿಲ್‌ಶಾಹಿ ಅರಸರ ಆಡಳಿತಕ್ಕೆ ಒಳಪಟ್ಟಿದ್ದು, ಜಮಖಂಡಿಯಲ್ಲಿ ಪಟವರ್ಧನ ಮನೆತನವು ಆಡಳಿತ ನಡೆಸುತ್ತಿತ್ತು. ಇವುಗಳ ಮಧ್ಯದಲ್ಲಿ ಹುಟ್ಟಿದ ಹನಗಂಡಿ ದೇಸಗತಿ ಗ್ರಾಮ ಮಟ್ಟದ ಆಡಳಿತವನ್ನು ಸಮಗ್ರ ಚಿತ್ರಣವನ್ನು ಬಿಂಬಿಸುವದು ಈ ಅಧ್ಯಯನದ ಉದ್ದೇಶವಾಗಿದೆ.

ಕದಂಬ, ಗಂಗ, ಚಲುಕ್ಯ, ಹೊಯ್ಸಳ, ರಾಷ್ಟ್ರಕೂಟ, ವಿಜಯನಗರ ಇತಿಹಾಸವು ಅರ್ಥಪೂರ್ಣ ಹಾಗೂ ಐತಿಹಾಸಿಕವೆಂದು ಗುರುತಿಸುತ್ತೇವೆಯೋ, ಅದೇ ರೀತಿಯಲ್ಲಿ ಈ ಸಂಸ್ಥಾನಗಳ ಅಥವಾ ಈ ದೇಸಗತಿಗಳ ಆಳ್ವಿಕೆಯನ್ನು ಗುರುತಿಸಿ ಅವರು ಸಮಾಜಕ್ಕೆ ನೀಡಿದ ಆಡಳಿತ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕೊಡುಗೆಗಳು ಏನೆಂಬುವದನ್ನು ಅರಿಯುವದು ಸಹ ಪ್ರಮುಖವಾದ ಘಟ್ಟವಾಗಿದೆ (೪).

ಇಂತಹ ದೇಸಗತಿಗಳ ಸಮಗ್ರ ತಲಸ್ಪರ್ಷ ಅಧ್ಯಯನ ನಡೆಯದೇ ಇದ್ದಲ್ಲಿ ಬಹು ಪರಿಚಯಾತ್ಮಕ, ಸಂಶೋದನಾತ್ಮಕ ಅಂಶಗಳನ್ನು ಹೊರ ಹಾಕದಿದ್ದರೆ ಇತಿಹಾಸದಲ್ಲಿ ಬಹುದೊಡ್ಡ ಕೊರತೆಯಾದಂತೆ ಅನಿಸುತ್ತದೆ. ದೇಸಗತಿಗಳ ಆಡಳಿತ ಕ್ರಮ ಅವುಗಳ ಸಾಧನೆಗಳನ್ನು ಮಾಡಿ, ಈ ನಾಡಿಗೆ ಕೊಟ್ಟಂತಹ ಕಾಣಿಕೆ ಏನೆಂಬುವದನ್ನು ಅಧ್ಯಯನಿಸುವದೇ ಈ ದೇಸಗತಿಗಳ ಅದ್ಯಯನದ ಮೂಲ ಉದ್ದೇಶವಾಗಿದೆ.

ಉತ್ತರ ಕರ್ನಾಟಕವೇ ದೇಸಗತಿಗಳ ಉಗಮಕ್ಕೆ ಕಾರಣವಾಗಿದೆ ಹಾಗಾಗಿ ಈ ಭಾಗದ ಪ್ರತಿಯೊಂದು ಗ್ರಾಮವು ದೇಸಗತಿಯ ಹೆಸರನ್ನು ಸೂಚಿಸುತ್ತವೆ. ಸಮಾಜದ ಸಾಮಾಜಿಕ, ಆರ್ಥಿಕ, ನ್ಯಾಯ, ಧರ್ಮ, ಸಾಹಿತ್ಯ, ಕಲೆ, ಗ್ರಾಮಗಳ ಪುನರ್ ನಿರ್ಮಾಣ ಹಾಗೂ ನೈಸರ್ಗಿಕ ಪರಿಸರವನ್ನು ಕಾಪಾಡುವ ಜನಮನದಲ್ಲಿ ಧೈರ್ಯ ಸಾಹಸಗಳನ್ನು ತುಂಬುವ ಅತ್ಯಮೋಘವಾದ ಪಾತ್ರವನ್ನು ತುಂಬುವದರಲ್ಲಿ ಮೇಲುಗೈ ಸಾಧಿಸಿದವರೆ ದೇಸಾಯಿಗಳಾಗಿದ್ದಾರೆ. ಯಾವುದೇ ಆಸೆ ಆಮೀಷಕ್ಕೆ ಒಳಗಾಗದೇ ಆ ದಿನಮಾನದಲ್ಲಿ ಸಂಸ್ಕೃತಿಯ ಸಂವಾಹಕರಾದ ಉಪೇಕ್ಷಿತ ನೆಲೆಯಲ್ಲಿ ನಿಂತವರು ದೇಸಗತಿಗಳೆಂಬುವದನ್ನು ಮರೆಯುವಂತಿಲ್ಲ. ಏಂತಹ ದೊಡ್ಡ ಹುದ್ದೆಯನ್ನು ಅಲಂಕರಿಸಿದರೂ

ಪ್ರಜೆಗಳನ್ನು 'ಯಥಾ–ರಾಜ, ತಥಾ–ಪ್ರಜಾ' ಎನ್ನುವ ನಾಣ್ಣುಡಿಯಂತೆ ಇವರನ್ನು ಕಲ್ಪಿಸುತ್ತದಲ್ಲದೇ ದೇಸಾಯಿಗಳ ಕಾರ್ಯ ವೈಖರಿ ಯಾವ ಅರಸನೊಂದಿಗೆ ವೈರತ್ವ ಬೆಳೆಸದೇ ಪ್ರಜೆಗಳ ಮತ್ತು ರಾಜರುಗಳ ನಡುವಿನ ಸುಮಧುರ ಬಾಂಧವ್ಯವನ್ನು ಕಲ್ಪಿಸಿ ಒಂದು ರೀತಿಯ "ಕ್ಯಾಸ್ಟಲ್ ಏಜೆಂಟ್" ಆಗಿ ಕಾರ್ಯ ನಿರ್ವಹಿಸಿ ದಕ್ಷಿಣ ಕರ್ನಾಟಕದ ಅರಸರಂತೆ ತಮ್ಮ ಚಿರ ಖ್ಯಾತಿಯನ್ನು ಇಂದಿಗೂ ಉಳಿಸಿಕೊಂಡಿದ್ದನ್ನು ಹಲವಾರು ದೇಸಗತಿಗಳಲ್ಲಿ ಗಮನಿಸಬಹುದಾಗಿದೆ.

ಈ ರೀತಿ ದೇಸಗತಿ ಮನೆತನಗಳ ಇತಿಹಾಸವನ್ನು ಒಂದೆಡೆಗೆ ಸಮಷ್ಟಿಗೊಳಿಸಲು ಆಕರ ಸಾಮಾಗ್ರಿಗಳ ಕೊರತೆ ವಿಪರಿತವಾಗಿ ಎದ್ದು ಕಾಣುತ್ತದೆ. ಕಾರಣವೆಂದರೆ, ಈ ಮನೆಗೆ ಬಂದಂತಹ ದತ್ತಕ ಪುತ್ರರು ತಮ್ಮ ಮೂಲ ಇತಿಹಾಸದ ಬಗ್ಗೆ ನಕಾರಾತ್ಮಕ ತಂತ್ರಗಳಲ್ಲಿ ತೊಡಗಿದ್ದು ತಮ್ಮ ದೇಸಗತಿ ಚರಿತ್ರೆಯನ್ನು ಇತಿಹಾಸಕ್ಕೆ ವಿಲೀನಗೊಳಿಸುವದನ್ನು ಒಟ್ಟು ಭೂಗತಗೊಳಿಸುತ್ತಾ ಸಾಗಿ ಬಂದಿದ್ದಾರೆ.

ಎರಡನೆಯದಾಗಿ—ಐಷಾರಾಮಿ ವೈಭವೋಪೇತ ಜೀವನಕ್ಕೆ ಗಂಟು ಬಿದ್ದಿದ್ದರಿಂದ ವಿಲಾಸಿಪ್ರೀಯರಾಗಿದ್ದರಿಂದ ತಮ್ಮ ಚರಿತ್ರೆಯನ್ನು ಮರೆಮಾಚಿದ್ದು ಕಾರಣವಾಗಿದೆ.

ಮೂರನೇಯದಾಗಿ – ರಾಜ್ಯ ಸಾಮ್ರಾಜ್ಯಗಳ ಉದಯ ಅಸ್ತಂಗಳ ನೆರಳಿನಾಟದಲ್ಲಿ ಕರ್ನಾಟಕವು ಅದರಲ್ಲಿ ಉತ್ತರ ಕರ್ನಾಟಕವು ಹಿಂದಿನಿಂದಲೂ ತನ್ನದೇಯಾದ ರಾಜಕೀಯ. ಧಾರ್ಮಿಕ, ಸಾಮಾಜಿಕ ಸ್ಥಿರತೆಗಳನ್ನು ಬಲವಾಗಿ ಹರಡಿಕೊಂಡಿದ್ದರೂ, ಸಹ ಈ ಪ್ರದೇಶವು ತನ್ನದೆಯಾದ ವೈಶಿಷ್ಟ್ಯತೆಗಳನ್ನು ಅಳವಡಿಸಿಕೊಂಡು ಇಂದಿನವರೆಗೂ ಆದರ್ಶಪ್ರಾಯವಾದಂತೆ ಕಂಡು ಬರುತ್ತದೆ. ಈ ದಿಶೆಯಲ್ಲಿ ಅನೇಕ ಜಾತಿ, ಮತ, ಪಂಥದವರು ಈ ನಾಡಿಗೆ ತಮ್ಮ ದೇಹಗಳನ್ನೆ ಮುಡುಪಾಗಿಟ್ಟ ವಿರೋಚಿತವಾದ ನಡುವಳಿಕೆಗಳು ಆದರ್ಶ ಜೀವನ, ಸಾವಿನೊಡನೆ ಹೋರಾಟ, ನಾಡಿಗಾಗಿ ತ್ಯಾಗ ಮಾಡಿದ್ದಾರೆ(೫). ಇಂಥವರು ತ್ಯಾಗ ಸಂಪನ್ನರು, ಬೋಗ ಸಂಪನ್ನರು ಆಗಿದ್ದರೆಂಬುದಕ್ಕೆ ಲೆಂಖರು, ಗರುಡರು, ವೇಳೆವಾರಿಗಳು ಇತ್ಯಾದಿ ವೃತ್ತಿಯವರು ಸಾಕ್ಷಿಯಾಗಿದ್ದಾರೆ.

ಇದೇ ಮಾದರಿಯಲ್ಲಿ ನಾಡಿನ ಏಳ್ಗೆಯಲ್ಲಿ ಸಕ್ರಿಯ ಪಾತ್ರವಹಿಸಿದ ಈ ನಾಡಿನ ದೇಸಗತಿಗಳ ಆಡಳಿತಗಳ ಕ್ರಮವು ಸಹ ಇದೇ ತಳಹದಿಯ ಮೇಲೆ ಸಾಗಿದೆ. ಶೌರ್ಯ, ಸಾಹಸ, ಸದ್ಗುಣ ಸಂಪನ್ನರನ್ನು ಬಹು ವಿಧದಲ್ಲಿ ಅನೇಕ ದೇಸಗತಿ ಮನೆತನಗಳು ಪೋಷಿಸಿ, ರಕ್ಷಿಸಿ, ಮರ್ಯಾದೆಯುತವಾಗಿ ಸಲ್ಲಿಸುವುದರ ಜೋತೆಗೆ ವೀರರಿಗೆ ಋಣಿಯಾಗಿ, ಹೊಗಳಿ ಅಂತವರಿಗೆ ಪ್ರಶಸ್ತಿ ನೀಡಿ ಸಮರ್ಥ

ಆಡಳಿತವನ್ನು ನಿರ್ವಹಿಸಿದಂತೆ ಕಂಡುಬರುತ್ತದೆ. ಇಂತಹ ತ್ಯಾಗಶೀಲ ವೀರರು ಜನಿಸದಿದ್ದರೆ ವಿಜಯನಗರದಂತಹ ಹಲವಾರು ರಾಜ ಮನೆತನಗಳು ಜನಿಸುತ್ತಿರಲಿಲ್ಲ ಎಂಬುದು ವಿಧಿತವಾಗುತ್ತದೆ.

ಹಿಂದಿನ ಕಾಲದಲ್ಲಿ ರಾಜ ಪುರೋಹಿತರಿಗೆ ಒಳ್ಳೆಯ ಗೌರವವಿತ್ತು. ಇವರನ್ನು ಜನ ದೈವ ಸಮಾನರೆಂದು ಭಾವಿಸಿದ್ದರು. ರಾಜರು ಸಹ ಎಲ್ಲರನ್ನು ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು. ಪೂಜ್ಯನೀಯವಾಗಿ ಗೌರವಿಸುತ್ತಿದ್ದರು. ಹಾಗೂ ಇವರು ಸಾಮಾಜಿಕ ಮೌಲ್ಯಗಳಿಗೆ ಕುಂದು ಬಾರದ ರೀತಿಯಲ್ಲಿ ಆಡಳಿತ ನಿರ್ವಹಣೆ ಮಾಡುತ್ತಿದ್ದರು. ಪ್ರಜಾಕ್ಷೇಮ, ಸಾಮಾಜಿಕ ಸ್ಥಿರತೆ ಮತ್ತು ರಕ್ಷಣೆ, ತಪ್ಪಿತಸ್ಥರಿಗೆ ಶಿಕ್ಷೆಗಳಂತಹ ಸಾಮಾಜಿಕ ಮೌಲ್ಯಗಳನ್ನು ಚಾಚು ತಪ್ಪದೆ ಪಾಲಿಸುವುದು ಇವರ ಕರ್ತವ್ಯವಾಗಿತ್ತು. ಇಂತಹ ಆದರ್ಶಮಯ ಆಡಳಿತ ಮತ್ತು ಸಾಮಾಜಿಕ ಮೌಲ್ಯಗಳು ದೇಸಗತಿಗಳ ಮನೆತನಗಳಲ್ಲೂ ಕಾಣಬರುತ್ತವೆ. ಈ ದೇಸಗತಿ ಮನೆತನಗಳ ಪರಸ್ಪರ ವೈವಿಧ್ಯಮಯವಾದ ಚಾರಿತ್ರಿಕ ಅಂಶಗಳು ಚರಿತ್ರೆಯ ಮೇಲೆ ಬೆಳಕು ಚಲ್ಲುತ್ತವೆ. ಆ ಕಾರಣಕ್ಕಾಗಿ ಈ ಮನೆತನಗಳು ತನ್ನದೆಯಾದ ಅನನ್ಯತೆಯನ್ನು ಪಡೆದುಕೊಂಡಿವೆ. ಈ ಹಿನ್ನಲೆಯಲ್ಲಿ ದೇಸಗತಿಗಳ ಕುರಿತು ಅದ್ಯಯನ ಮಾಡುವದು ಅವಶ್ಯವಾಗಿದೆ. (೬)

## ದೇಸಗತಿ ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧದ ಮೊದಲ ಅಧ್ಯಾಯವು ದೇಸಗತಿ ಪದದ ಅರ್ಥ. ಅಧ್ಯಯನದ ವ್ಯಾಪ್ತಿ ಅಧ್ಯಯನದ ಉದ್ದೇಶ ಮತ್ತು ಮಹತ್ವ ಹಾಗೂ ದೇಸಗತಿಯ ಸ್ವರೂಪ ವಿವಿಧ ನೆಲೆಗಳಲ್ಲಿ ಅಧ್ಯಾಯವನ್ನು ಕಟ್ಟಿಕೊಡಲಾಗಿದೆ ಅಥವಾ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹನಗಂಡಿ ದೇಸಗತಿ ದೇಸಾಯಿ ಮನೆತನದ ಸಂಕ್ಷಿಪ್ತ ಚರಿತ್ರೆಯನ್ನು ಕಾರ್ಯಕ್ಷೇತ್ರವನ್ನು ಈ ಅಧ್ಯಾಯದಲ್ಲಿ ಕಟ್ಟಿಕೊಡಲಾಗಿದೆ.

ಅಧ್ಯಾಯ ಮೂರರಲ್ಲಿ ಹನಗಂಡಿ ದೇಸಾಯಿಯವರ ಸಾಂಸ್ಕೃತಿಕ ಕೊಡುಗೆಗಳನ್ನು ವಿಶೇಷವಾಗಿ ಗುರುತಿಸಲಾಗಿದೆ. ಆಡಳಿತ, ಸಾಮಾಜಿಕ, ಆರ್ಥಿಕ, ಕಂದಾಯ, ಧಾರ್ಮಿಕ ಹಾಗೂ ಕಲೆ ಮತ್ತು ವಾಸ್ತುಶಿಲ್ಪ ವ್ಯವಸ್ಥೆಯನ್ನು ಗಮನದಲ್ಲಿ ಇಟ್ಟು ಕೊಂಡು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಇಡೀ ದೇಸಗತಿಗಳ ಅಧ್ಯಯನದ ಭಾಗವಾಗಿದೆ. ಒಟ್ಟು ಅಧ್ಯಯನದ ಪಲಿತಾಂಶವನ್ನು ಕಂಡುಕೊಳ್ಳಲಾಗಿದೆ.

ಹೀಗೆ ಹನಗಂಡಿ ದೇಸಗತಿ ಮನೆತನವನ್ನು ವಿಶೇಷ ಅಧ್ಯಯನಕ್ಕೆ ಒಳಪಡಿಸಿ ಆಡಳಿತಾತ್ಮಕ ಚಾರಿತ್ರಿಕ ದಾಖಲೆಗಳನ್ನು ಆಧರಿಸಿ ಅಧ್ಯಯನ ನಡೆಸಲಾಗಿದೆ. ಪ್ರತಿಯೊಂದು ಅಧ್ಯಾಯಗಳಲ್ಲಿ ಸಂಬಂಧಿಸಿದ ವಿವಿಧ ವಿಷಯವನ್ನು ಜೋಡಿಸಿಕೊಂಡು ಅಧ್ಯಯನಿಸಲಾಗಿದೆ ಆ ಮೂಲಕ ಸಕರಾತ್ಮಕ ಮತ್ತು ನಕಾರಾತ್ಮಕ ಬೆಳವಣಿಗೆಯನ್ನು ಅವುಗಳ ಸಾಮಾಜಿಕ ಸಾಂಸ್ಕೃತಿಕ ಉಪಯುಕ್ತತೆಯನ್ನು ಚರ್ಚಿಸಲಾಗಿದೆ. ಇಂತಹ ದೇಸಗತಿಗಳನ್ನು ಉಳಿಸಿ ಬೆಳಿಸಿಕೊಳ್ಳಲೂ ಬೇಕಾದ ಅಭಿಪ್ರಾಯವನ್ನು ಮಂಡಿಸಲಾಗಿದೆ.

## ದೇಸಗತಿ ಅಧ್ಯಯನದ ಪೂರ್ವ ಪ್ರಯತ್ನಗಳ ಸಮೀಕ್ಷೆ

ಜಾಗತೀಕರಣ ಯುಗದಲ್ಲಿ ಇಂತಹ ಅನೇಕ ಸಾಹಿತ್ಯಿಕ ಚಾರಿತ್ರಿಕ ಅಧ್ಯಯನಗಳನ್ನು ಮುಂದುವರೆಸಿಕೊಂಡು ಹೋಗುವುದು ಅಸಾದ್ಯವಾದದ್ದು ಏನಿಸುತ್ತದೆ, ಎಕೆಂದರೆ ಸಾಹಿತ್ಯಕರ ಓಘವು, ಪಶ್ಚಿಮಾಭಿಮುಖವಾಗಿರುವದರಿಂದ ಸಾಹಿತ್ಯಿಕ ಕ್ರಿಯೆ ಕುಂಠಿತವಾಗುತ್ತದೆ. ಈ ದಿಸೆಯಲ್ಲಿ ಸಂಶೋಧಕರು ಚಾರಿತ್ರಿಕ ಜಾಡನ್ನು ಹಿಡಿದು ಸ್ಥಾನಿಕ ಒಡೆತನದ ಕುರಿತಾಗಿ ಸಂಶೋಧನೆಗೆ ಒಳಪಡದಿರುವುದು ಅಂಶ, ಅಪಿಕ್ಷೀತಕ್ಕೆ ಕಾರಣವಾಗಿದೆ. ಈ ದೆಸೆಯಲ್ಲಿ ಉತ್ತರ ಕರ್ನಾಟಕದ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಹನಗಂಡಿ ದೇಸಗತಿ ಬಗ್ಗೆ ಅಧ್ಯಯನ ಕೈಕೊಂಡಾಗ ಪೂರ್ವ ಪ್ರಯತ್ನಗಳ ಸಮಿಕ್ಷೆಗಳನ್ನು ಇಡಿ ದೇಸಗತಿಗಳ ನೆಲೆಗಳನ್ನು ಗುರುತಿಸಲು ಪ್ರಯತ್ನಿಸುತ್ತಿರುವಾಗ ವ್ಯವಸ್ಥಿತವಾಗಿ ಅಧ್ಯಯನ ನಡೆದಿಲ್ಲ ಆದರೆ ಇದೇ ಮಾದರಿಯಲ್ಲಿ ದಕ್ಷಿಣ ಕರ್ನಾಟಕದ ಪಾಳೆಗಾರರ ಕುರಿತಾಗಿ ಸಾಕಷ್ಟು ಅಧ್ಯಯನ ನಡೆದಿದೆ. ನಮ್ಮ ಸಂಶೋಧಕರ ಅಲಕ್ಷಿತ ಅಧ್ಯಯನದ ದೃಷ್ಟಿಯಿಂದ ತುಂಬಾ ನಿರ್ಲಕ್ಷಕ್ಕೆ ಒಳಗಾಗಿದ್ದು, ತಿಳಿದು ಬರುತ್ತದೆ. ಹಾಗೆಯೇ ಕೆಲವು ಸಾಹಿತಿಗಳು, ಪ್ರಬಂಧಕಾರರು, ಲೇಖಕರು, ವಿದ್ವಾಂಸರು ಚಿಕ್ಕ ಮಟ್ಟ ಕುರಿತಾಗಿ ಅಧ್ಯಯನ ನಡೆಸಿದರೂ ನಿರ್ದಿಷ್ಟ ಅಧ್ಯಯನಕ್ಕೆ ಒಳಪಡಿಸದೇ ಇರುವುದು ಇನ್ನೂ ವಿಷಾದನೀಯ.

ದಕ್ಷಿಣ ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕ ಸ್ಥಳಿಯ ಆಡಳಿತದ ಜವಾಬ್ದಾರಿಯನ್ನು ಹೊತ್ತಂತಹ ಪರಗಣಗಳ ಅಧಿಕಾರಿಗಳನ್ನು ಚೌಗಲೆ, ಚೌಧರಿ, ದೇಸಾಯಿ, ನಾಡಗೌಡ ಎಂದು ಕರೆದದ್ದು ಉಂಟು ಹಾಗಾಗಿ ದಕ್ಷಿಣ ಮಹಾರಾಷ್ಟ್ರದಲ್ಲಿ ಈ ಕುರಿತಾದ ಯಾವುದೇ ಒಂದು ಹೇಳಿಕೆಗಳು ಇಲ್ಲ, ಆದರೆ ತತ್ಕಾಲಿಕ ಒಂದು ಸಮಾದಾನದ ಸಂಗತಿಯೆನೆಂದರೆ, ಕೆಲವು ಬಿಡಿ ಚಿಂತನೆಗಳು, ಲೇಖನಗಳು ನಡೆದದ್ದು ಮಾತ್ರ ಕಾಣುತ್ತದೆ. ಇತ್ತಿಚೆಗೆ ಹಂಪಿ ಕನ್ನಡ ವಿಶ್ವ ವಿದ್ಯಾಲಯದಿಂದ ಬಾಗಲಕೋಟೆ ಜಿಲ್ಲೆಯ ದೇಸಗತಿಗಳ ಕುರಿತು ಡಾ. ಸಂಗಮೇಶ ಕಲ್ಯಾಣಿ ಧಾರವಾಡ ಜಿಲ್ಲೆಯ ದೇಸಗತಿಗಳ ಕುರಿತು ಡಾ. ಎ. ಸಿ. ನಾಗಭೂಷಣಮೂರ್ತಿ ಅವರು ಅಧ್ಯಯನ ಮಾಡಿದ್ದಾರೆ. ಬಿಜಾಪೂರ ಜಿಲ್ಲೆಯ ದೇಸಗತಿಗಳ ಕುರಿತು ಡಾ. ಶೇಖದಾರ ಹಾಗೆಯೇ ಬೆಳಗಾವಿ ಜಿಲ್ಲೆಯ ಸಿರಸಂಗಿ ದೇಸಗತಿಗಳ ಕುರಿತು ಡಾ. ವಿರೂಪಾಕ್ಷ ಬಡಿಗೇರ ಕೆಲವು ಅರಸು ಮನೆತನಗಳ ಕುರಿತಾಗಿ, ಡಾ. ಎಮ್. ಎಮ್. ಕಲಬುರ್ಗಿ

ಹಿರಿಯ ವಿದ್ವಾಂಸರು ಸಂಪಾದನೆ ಕೈಕೊಂಡದ್ದು ಬಿಟ್ಟರೆ ಮತ್ತಾವ ಪ್ರಯತ್ನಗಳು ನಡೆಯದೆ ಇರುವದು ವಿಷಾದನೀಯ.

ಒಟ್ಟಾರೆಯಾಗಿ ಗಮನ ಹರಿಸುವದಾದರೆ ಈ ನಾಡಿನ ದೇಸಗತಿಗಳು ಸಮಾಜಮುಖಿಯಾಗಿ ಕೆಲಸ ಮಾಡಿದ್ದನ್ನು ಗಮನಿಸಿದರೆ ಇನ್ನೂ ಅನೇಕ ದೇಸಗತಿಗಳು ನಿರ್ಲಕ್ಷಕ್ಕೆ ಒಳಗಾಗಿವೆ. ಈ ದಿಸೆಯಲ್ಲಿ ಇದ್ದ ಇತಿಹಾಸ ಕಳಚಿ ಹೋಗುವ ಪೂರ್ವದಲ್ಲಿಯೇ ಅವೆಲ್ಲವುಗಳನ್ನು ಸಾರ ಸಂಗ್ರಹವಾಗಿ ಅಧ್ಯಯಿನಿಸುವದು ಅವಶ್ಯವೆನಿಸುತ್ತದೆ.

## ಅಡಿ ಟಿಪ್ಪಣಿಗಳು

೧. ಪ್ರೊ. ಲಕ್ಷ್ಮಣ ತಲಂಗಾಂವಿ – ಕರ್ನಾಟಕ ಪಾಳೆಗಾರರ ನ್ಯಾಯಾಡಳಿತ. ಪ್ರಕಟನೇಯ ವರ್ಷ – ೨೦೦೪. ಪುಟ ಸಂಖ್ಯೆ ೩೩೪.

೨. ಡಾ. ಸಂಗಮೇಶ ಕಲ್ಯಾಣಿ – "ಬಾಗಲಕೋಟೆ ಜಿಲ್ಲೆಯ" ದೇಸಗತಿಗಳು ಕನ್ನಡ ವಿಶ್ವವಿದ್ಯಾಲಯ, ಹಂಪಿ. – ೨೦೦೬. ಪುಟ ಸಂಖ್ಯೆ ೧೪.

೩. ಅದೇ ಪುಟ.

೪. ಡಾ. ಎ. ಸಿ. ನಾಗಭೂಷಣಮೂರ್ತಿ – "ಧಾರವಾಡ ಜಿಲ್ಲೆಯ ದೆಸಗತಿಗಳು" ಕನ್ನಡ ವಿಶ್ವವಿದ್ಯಾಲಯ, ಹಂಪಿ. ಮಹಾಪ್ರಬಂಧ ಪುಟ ಸಂಖ್ಯೆ ೯.

೫. ಅದೇ ಪುಟ.

೬. ಅದೇ ಪುಟ.

ಅಧ್ಯಾಯ ೨

# ಹನಗಂಡಿ ದೇಸಗತಿಯವರ ಇತಿಹಾಸ

## ಹನಗಂಡಿ ದೇಸಗತಿ ಅಧ್ಯಯನದ ಆಕರಗಳು

ಮಾನವನ ಗತಕಾಲದ ಜೀವನ ಚರಿತ್ರೆಯೇ ಇತಿಹಾಸವಾಗಿದೆ. ಯವುದೇ ಇತಿಹಾಸ ರಚನೆಗೆ ಆಧಾರಗಳು ಬಹುಮುಖ್ಯ ಆಕರಗಳಿಲ್ಲದೇ ಇತಿಹಾಸವಿಲ್ಲ, ಅದರಂತೆ ಹನಗಂಡಿ ದೇಸಾಯಿಯವರ ಇತಿಹಾಸ ರಚಿಸಲು ಆಕರಗಳು ಮುಖ್ಯವಾಗಿವೆ. ಈ ದೇಸಗತಿಯ ಕುರಿತು ಆಕರಗಳು ವಿಪುಲವಾಗಿ ಸಿಗುವದಿಲ್ಲ. ಕಾಲಾನುಕ್ರಮಕ್ಕೆ ಸರಿಯಾಗಿ ದೊರೆಯುವದಿಲ್ಲ. ಯಾವ ಗ್ರಂಥಗಳು ಸ್ಪಷ್ಟವಾದ ಮಾಹಿತಿಯನ್ನು ನೀಡುವುದಿಲ್ಲ, ಹಾಗೂ ವೀಕ್ಷಣೆಗೆ ಹೋದಾಗ ದೇಸಗತಿಯ ಬಗ್ಗೆ ವಿಚಾರಿಸಿದಲ್ಲಿ ಏಕಪ್ರಕಾರವಾಗಿ ಕಥೆ ಹೇಳಲು ಪ್ರಾರಂಭಿಸುತ್ತಾರೆ. ಆದರೂ ಆಕರಗಳು ಈ ಕೆಳಗಿನಂತಿವೆ.

## ಪ್ರಮುಖ ಮೂಲ ಆಧಾರಗಳು




## ಸಾಹಿತ್ಯಿಕ ಗ್ರಂಥಗಳು

ಈ ರೀತಿಯಾಗಿ ವಿಂಗಡಿಸಿದರೂ ಇವರ ಸಾಹಿತ್ಯಿಕ ಗ್ರಂಥಗಳು ಕಾಣಸಿಗುವದಿಲ್ಲ, ಆದರೂ ದೇಸಾಯಿ ಪರಗಣ ತೇರದಾಳ ಮರಾಠಿ ದಾಖಲೆ, ಪುಣೆ ಆರ್ಕೈಸ್ ಪತ್ರಾಗಾರ ಇಲಾಖೆಯ ಕಾಗದ ಪತ್ರಗಳು, ಬಿಜಾಪೂರ ಜಿಲ್ಲೆಯ ಗೆಜೆಟಿಯರಗಳು ಮುಂತಾದ ಸಾಹಿತ್ಯಿಕ ಆಕರಗಳಾಗಿವೆ.

## ಪುರಾತತ್ವ ಮೂಲಾಧಾರಗಳು

ಒಂದು ದೇಶದ ಇಲ್ಲವೆ ರಾಜ್ಯದ ಇತಿಹಾಸ ರಚಿಸಲು ಸಾಹಿತ್ಯಿಕ ಮೂಲಾಧಾರಗಳು ಎಷ್ಟು ಅವಶ್ಯಕವೋ ಅಷ್ಟೇ ಪುರಾತತ್ವ ಮೂಲಾಧಾರಗಳು ಮುಖ್ಯವಾಗಿವೆ. ಕೆಲವೊಮ್ಮೆ ಸಾಹಿತ್ಯಿಕ ಮೂಲಾಧಾರಗಳು ದೊರಕದೇ ಇದ್ದಲ್ಲಿ ಪುರಾತತ್ವ ಮೂಲಾಧಾರಗಳಿಂದ ಚರಿತ್ರೆ ರಚಿಸಬೇಕಾಗುತ್ತದೆ.

ಹನಗಂಡಿ ದೇಸಾಯಿಯವರ ಚರಿತ್ರೆ ರಚಿಸಲು ಪ್ರಾಕ್ತನ ಮೂಲಾಧಾರಗಳು ಅಷ್ಟೇ ಮುಖ್ಯ ಪಾತ್ರವಹಿಸುತ್ತವೆ. ಇವರ ಕಾಲದ ಯಾವುದೇ ಶಾಸನಗಳು ದೊರೆತಿಲ್ಲಾ. ನಾಣ್ಯಗಳು ಮತ್ತು ಸ್ಮಾರಕಗಳು ಇವರ ಇತಿಹಾಸ ರಚಿಸಲು ಸಹಾಯಕಾರಿಯಾಗಿವೆ.

## ನಾಣ್ಯಗಳು

ನಾಣ್ಯಗಳ ಅಧ್ಯಯನವನ್ನು ನಾಣ್ಯಶಾಸ್ತ್ರವೆಂದು ಕರೆಯುತ್ತೇವೆ. ಹನಗಂಡಿಯಲ್ಲಿ ಬಹಮನಿ ಹಾಗೂ ಬಿಜಾಪೂರ ಆದಿಲಶಾಹಿ ಕಾಲದ ಸುಮಾರು ೮೨೦ ಚಿನ್ನ, ಬೆಳ್ಳಿ ಹಾಗೂ ತಾಮ್ರದ ನಾಣ್ಯಗಳು ಪತ್ತೆಯಾಗಿವೆ. ಇದರಿಂದ ಬಿಜಾಪೂರದ ಆದಿಲಶಾಹಿಯಿಂದ ದೇಸಗತಿ ಸಂಪಾದಿಸಿದರೆಂದು ಕೂಡ ತಿಳಿದು ಬರುತ್ತದೆ. ಹಾಗೂ ಇವರ ಅಧಿಕಾರದ ಅವಧಿಯಲ್ಲಿ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳ ಚಲಾವಣೆ ಮತ್ತು ಹನಗಂಡಿಯಲ್ಲಿ ನಾಣ್ಯ ಸಂಗ್ರಹವಿತ್ತೆಂದು ತಿಳಿದು ಬರುತ್ತದೆ.

## ಸ್ಮಾರಕಗಳು

ಕಲೆ, ವಾಸ್ತುಶಿಲ್ಪ ಮತ್ತು ಚಿತ್ರಕಲೆಗಳು ಇವರ ಇತಿಹಾಸ ರಚನೆಗೆ ಬಹು ಉಪಯುಕ್ತ ಆಧಾರಗಳಾಗಿವೆ. ಇವರ ೧೦ ಎಕರೆ ವಿಶಾಲವಾದ ಪ್ರದೇಶದಲ್ಲಿಯ ವಾಡೆ, ವಾಡೆಯಲ್ಲಿರುವ ಅಲ್ಲಮಪ್ರಭು ದೇವಾಲಯ, ಗಣೇಶ ದೇವಾಲಯ, ಜೈನ ಬಸದಿ, ಹನಗಂಡಿಯಲ್ಲಿರುವ ಮಸೀದಿ, ತೇರದಾಳದಲ್ಲಿರುವ ಜಿನಗೇ ಷಾ ದರ್ಗಾ, ಹಾಗೂ ಅಲ್ಲಿರುವ ಪಟ್ಟಣ ಪಂಚಾಯತಿ ಕಾರ್ಯಾಲಯ, ಆರಕ್ಷಕ ಠಾಣೆಯ ಕಟ್ಟಡ, ಹಳಂಗಳಿ, ಮದಲಮಟ್ಟಿ, ಹನಗಂಡಿ, ತೇರದಾಳದಲ್ಲಿರುವ ಬಸದಿಗಳು ಇವರ ಕಾಲದ ಸ್ಮಾರಕಗಳಾಗಿವೆ.

ಈ ರೀತಿಯಾಗಿ ಇವರ ಚರಿತ್ರೆ ರಚಿಸಲು ಪ್ರಮುಖ ಆಕರಗಳಾಗಿವೆ.

## ಹನಗಂಡಿ ಎಂಬ ಪದ

ನಮ್ಮ ಕರ್ನಾಟಕದಲ್ಲಿ ಪ್ರತಿಯೊಂದು ಗ್ರಾಮಕ್ಕೆ ತನ್ನದೇ ಆದ ವಿಶಿಷ್ಟ ಹೆಸರಿನಿಂದ ಕೂಡಿರುತ್ತವೆ. ಇಲ್ಲವೆ ತನ್ನದೇ ಆದ ಹಿನ್ನಲೆಯನ್ನು ಹೊಂದಿರುತ್ತದೆ. ಕರ್ನಾಟಕ ಎಂಬ ಹೆಸರು ಬರಲು ಕರ್ + ನಾಡು = ಕರ್ನಾಡು – ಕನ್ನಡು – ಕನ್ನಡ – ಮುಂತಾಗಿ ಮಾರ್ಪಟ್ಟಿರುವಂತೆ, ಹನಗಂಡಿ ಎಂಬ ಹೆಸರು ಬರಲು ತನ್ನದೇ ಆದ ಹಿನ್ನಲೆಯನ್ನು ಹೊಂದಿರುತ್ತದೆ. ಈ ಒಂದು ಹನಗಂಡಿ ಪ್ರದೇಶ ಸಂಪದ್ಭರಿತವಾದ

ಪ್ರದೇಶವಾಗಿತ್ತು. ಹಣದ ಹೊಳೆ ಹರಿಯುತ್ತಿತ್ತು, ಆದ್ದರಿಂದ ಹನಗಂಡಿ ಎಂಬ ಹೆಸರು ಬಂದಿತು ಎಂದು ಕೇಳಿಬರುತ್ತದೆ.

ಹಣದ – ಗಿಂಡಿ – ಹನಗಂಡಿ

ಹೊನದ – ಗಂಡಿ – ಹೊನಗಂಡಿ – ಹನಗಂಡಿ

ಮುಂತಾಗಿ ಹೆಸರಿನಿಂದ ಹನಗಂಡಿ ಎಂದು ಪ್ರಸಿದ್ಧಿ ಪಡೆದಿದೆ. ಹನಗಂಡಿಯು ಜಮಖಂಡಿಯಿಂದ ಪಶ್ಚಿಮಕ್ಕೆ ೨೫ ಕಿ.ಮಿ. ತೇರದಾಳದಿಂದ ಪೂರ್ವಕ್ಕೆ ೪ ಕಿ.ಮೀ. ದೂರದಲ್ಲಿರುವ ಈ ಪುಟ್ಟ ಗ್ರಾಮ ಹಲವು ವೈಶಿಷ್ಟ್ಯಗಳಿಂದ ಹೆಸರು ಪಡೆದುಕೊಂಡಿದೆ.

## ಹನಗಂಡಿ ದೇಸಾಯಿಯವರ ಮೂಲ

ಹನಗಂಡಿ ದೇಸಗತಿ ಮನೆತನವು ಮೂಲತಃ ತೇರದಾಳದಲ್ಲಿದ್ದು, ತೇರದಾಳ ಪಟ್ಟಣವು ವಿಸ್ತಾರವಾಗಹತ್ತಿತ್ತು. ತೇರದಾಳ ಪಟ್ಟಣದಿಂದ ಸುಮಾರ ೪ ಕೀ.ಮಿ. ದೂರದಲ್ಲಿರುವ ಒಂದು ವಿಶಾಲವಾದ ಪ್ರದೇಶದಲ್ಲಿ ವಾಡೆಯನ್ನು ನಿರ್ಮಿಸಿದರು.

ಇವರ ಮೂಲದ ಬಗ್ಗೆ ಸ್ಪಷ್ಟವಾದ ಮಾಹಿತಿಗಳು ಲಭ್ಯವಿಲ್ಲ, ಆದರೂ ಕೂಡಾ ಈ ಒಂದು ಪ್ರದೇಶ ಬಿಜಾಪೂರದ ಆದಿಲ್‌ಷಾಹಿಗಳ ಆಡಳಿತಕ್ಕೆ ಒಳಪಟ್ಟತ್ತೆಂದು ತಿಳಿದಿಬರುತ್ತದೆ. ಬಿಜಾಪೂರದ ಆದಿಲ್‌ಷಾಹಿಯ ಸೈನಿಕರು ಕುದರೆಗಳ ಮೇಲೆ ಹೊಗುತ್ತಿರುವಾಗ ಅವರನ್ನು ತಡೆದು ಅವರ ಕುದುರೆಗಳನ್ನು, ಆನೆಗಳನ್ನು ಕಳವು ಮಾಡುತ್ತಿದ್ದರು. ಆಗ ಬಿಜಾಪೂರದ ಆದಿಲ್‌ಷಾ, ಜಿನಪ್ಪಾ ದೇಸಾಯಿ ಇತನನ್ನು ಹಿಡಿದುಕೊಂಡು ಬರುವಂತೆ ಆಜ್ಞೆ ಮಾಡಿದನು. ಆಗ ಆದಿಲ್‌ಷಾಹಿಯ ಸೈನಿಕರು, ಇತನನ್ನು ಹುಡುಕಲು ಪ್ರಾರಂಭಿಸಿದರು. ಆಗ ಜಿನಪ್ಪಾ ನನ್ನನ್ನು ಇವರು ಬಿಡುವುದಿಲ್ಲವೆಂದು ತಿಳಿದು ತೇರದಾಳದಲ್ಲಿದ್ದ ಮುಸ್ಲಿಂ ಸಂತನಾದ "ಜಿನಗೆ ಷಾ"ನ ಹತ್ತಿರ ಬಂದು ನಡೆದ ಎಲ್ಲಾ ಘಟನೆಗಳನ್ನು ವಿವರಿಸಿದನು.

ಆಗ ಜಿನಗೆ ಷಾ ಜಿನಪ್ಪನಿಗೆ (ಕೃಷ್ಣಗೌಡ) ಮೂರು ಗುಟುಗಳನ್ನು (ಕಲ್ಲುಗಳು) ಕೊಟ್ಟನಂತೆ, ಅವುಗಳನ್ನು ತೆಗೆದುಕೊಂಡು ನಿನ್ನ ಹತ್ತಿರ ಇಟ್ಟುಕೊಳ್ಳಿ ನಿನಗೆ ಯಾವುದೇ ತೊಂದರೆಯಾಗುವುದಿಲ್ಲವೆಂದು, ನಿನಗೆ ಯಾವ ಆತಂಕಗಳು ಬರುವದಿಲ್ಲವೆಂದು ಹೇಳಿದರಂತೆ. ಆದಿಲ್‌ಷಾ ಸೈನಿಕರು ಇವನನ್ನು ಹಿಡಿದುಕೊಂಡು ಬಿಜಾಪೂರಕ್ಕೆ ಕರೆದೊಯ್ದರು ಆಗ ತನ್ನಲ್ಲಿದ್ದ ಒಂದು

ಕಲ್ಲನ್ನು ಕೆಳಗೆ ಒಗೆದನು, ಬಿಜಾಪೂರ ಆದಿಲ್‌ಷಾ ಇವನಿಗೆ ಏನು ಮಾತನಾಡದೆ ಇತನನ್ನು ಕೊಲ್ಲುವುದಕ್ಕಾಗಿ ತನ್ನಲ್ಲಿ ಒಂದು ಕುದುರೆಗೆ ಹುಚ್ಚು ಹಿಡಿದಿತ್ತು. ಆ ಕುದುರೆಯನ್ನು ಕೊಟ್ಟು ಕಳುಹಿಸಿದನು ಆಗ ಜಿನಗೆ ಷಾ ಹೇಳಿದಂತೆ ತನ್ನಲ್ಲಿ ಇದ್ದ ಎರಡನೆಯ ಕಲ್ಲನ್ನು ಕೆಳಗೆ ಬಿಟ್ಟು ಕುದುರೆಯನ್ನು ಏರಿದ, ಅದನ್ನು ಹತ್ತಿಕೊಂಡು ನಂದೇಶ್ವರದಲ್ಲಿ ಹನುಮಂತ ದೇವರ ಗುಡಿ ಮುಂದಿನ ಸ್ತಂಭವನ್ನು ಸುತ್ತುಹಾಕಿ ಬಿಜಾಪೂರಕ್ಕೆ ಹೋಗಿ ಆದಿಲ್‌ಷಾ ಮುಂದೆ ನಿಂತಾಗ ಆತನಿಗೆ ಅಚ್ಚರಿಯಾಯಿತು. ಈತ ಸತ್ತು ಹೋಗಿದ್ದನೆಂದು ತಿಳಿದುಕೊಂಡಿದ್ದಾಗ ಆತನ ಮುಂದೆ ಪ್ರತ್ಯಕ್ಷನಾದನು ತನ್ನಲ್ಲಿ ಇದ್ದ ಇನ್ನೊಂದು ಕಲ್ಲನ್ನು ಕೆಳಗೆ ಒಗೆದನು. ಆಗ ಬಿಜಾಪೂರದ ಆದಿಲ್‌ಷಾ ಇತನಿಗೆ "ಹುಚ್ಚು ಕುದುರೆಯ ಯಜಮಾನ" ಎಂಬ ಬಿರುದನ್ನು ಕೊಟ್ಟು ೫ ಹಳ್ಳಿಯ ಇನಾಂ ಕೊಟ್ಟರಂತೆ,

೧. ಹನಗಂಡಿ ೨. ಹಳಂಗಳಿ ೩. ತಮದಡ್ಡಿ ೪. ಮದಲಮಟ್ಟಿ ೫. ತೇರದಾಳ ಇನಾಂ ಗಳಿಸಿಕೊಂಡು ಆದಿಲ್‌ಷಾಹಿಯಿಂದ ಶೂರತನ ಗಳಿಸಿ ಇನಾಂ ಗಳಿಸಿಕೊಂಡಿದ್ದು "ಬಹುತ ಖುಷ ಹೊ", "ತುಮ್ ಪಾಗಲ್ ಗೊಡಾ ಖಾನ್" ಎಂದು ಆದಿಲ್‌ಷಾಹಿಯಿಂದಾ ಬಿರುದನ್ನು ಪಡೆದವರು ಈ ಕೃಷ್ಣಗೌಡಾ.

## ಇನ್ನೊಂದು ಸಾಹಿತ್ಯಿಕ ಮೂಲಗಳ ಪ್ರಕಾರ

ಹನಗಂಡಿ ದೇಸಾಯಿ ಮನೆತನದವರು ಮೂಲತಃ ಮಹಾರಾಷ್ಟ್ರದವರು, ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ಬಂದರೆಂದು ತಿಳಿದು ಬರುತ್ತದೆ. ಇವರ ಪೂರ್ವ ಸ್ಥಳ ಕೆಬ್ಬಿನ ಶಿವನಗಿಯವರು, ಇದು ಸೊಲ್ಲಾಪೂರ ಜಿಲ್ಲೆಯ ತುಳಜಾಪೂರ ತಾಲೂಕಿನಲ್ಲಿದೆ. ಇಲ್ಲಿಂದ ಅವರು ೧೦೨೬ರಲ್ಲಿ ಬಿಟ್ಟು ೧೪೫೨ರವರೆಗೆ ಗೂಲ್ಕಿಮಾಳಕಕ್ಕೆ ಬಂದರು, ಮುಂದೆ ಅಣ್ಣ ತಮ್ಮರಲ್ಲಿ ಆಸ್ತಿಯು ಪಾಲಾಗಿ, ೧೪೫೨ರಲ್ಲಿ ಹನಗಂಡಿಗೆ ಬಂದರು, ಇವರು ತೇರದಾಳ ಪ್ರಭುಲಿಂಗಾನಂದೇಶ್ವರ ಬಲಭೀಮಾ ಭಕ್ತರು, ಈ ರೀತಿ ಇವರು ಹನಗಂಡಿಯಿಂದ ದೇಸಗತಿಯು ಪ್ರಾರಂಭವಾಯಿತು.

## ದೇಸಾಯಿಗಳ ಕಾರ್ಯಕ್ಷೇತ್ರ

ಉತ್ತರ ಕರ್ನಾಟಕದಲ್ಲಿಯ ಹಲವು ದೇಸಗತಿಗಳಲ್ಲಿ ಹನಗಂಡಿ ದೇಸಾಯಿಯವರ ದೇಸಗತಿಯು ಒಂದು, ಇವರ ಕಾರ್ಯವ್ಯಾಪ್ತಿಯೂ ಕೂಡಾ ಅಷ್ಟೆ ವಿಶಿಷ್ಟವಾದದ್ದು, ಸುಮಾರು ಮೂವತ್ತೂರು(೩೩) ಹಳ್ಳಿಗಳು ಹಾಗೂ ಸುಮಾರು ೧೨೦೦೦ ಎಕರೆ ಜಮೀನನ್ನೊಳಗೊಂಡ ಇವರ ಆಡಳಿತ ಕ್ಷೇತ್ರವು ಇಂದಿನ ಜಮಖಂಡಿ, ರಾಯಬಾಗ, ಅಥಣಿ ಹಾಗೂ ಗೋಕಾಕ ತಾಲೂಕಿನ ಬಹುಭಾಗಗಳ ವ್ಯಾಪ್ತಿಯನ್ನೊಳಗೊಂಡಿತ್ತು.

ಪ್ರಾಚೀನ ಕರ್ನಾಟಕದಿಂದಲೇ ಹಲವು ರಾಜ ಮನೆತನಗಳ ಕೊಡುಗೆಗಳನ್ನು ಪರಿಗಣಿಸಿ ನೋಡಲಾಗಿ ಅದರಲ್ಲಿ ಹಲವು ರೀತಿಯಾದ ಸಾಮ್ಯತೆ ಇದ್ದರೂ ಕೂಡಾ ಕಾಲದಿಂದ ಕಾಲಕ್ಕೆ ಬದಲಾವಣೆಯಾಗಿದ್ದನ್ನು ಕಾಣಬಹುದು. ರಾಜಕೀಯ, ಸಾಮಾಜಿಕ, ಧಾರ್ಮಿಕವಾಗಿ ಪರಸ್ಪರ ವ್ಯತ್ಯಾಸವನ್ನು ಕಾಣಬಹುದು.

ಕರ್ನಾಟಕದ ಪ್ರಾಚಿನ ರಾಜ ಮನೆತನಗಳು ಹಲವು ಸ್ಥಿತ್ಯಂತರಗಳನ್ನೆದುರಿಸಿ ತಮ್ಮದೇ ಆದ ಆಡಳಿತ ಕ್ರಮವನ್ನು ರೂಪಿಸಿಕೊಂಡು ಬಂದಿದ್ದವಷ್ಟೆ ಅದರಂತೆ ವಿಕೇಂದ್ರಿಕರಣ ಆಡಳಿತ ವ್ಯವಸ್ಥೆಯೂ ಕೂಡಾ ಅಸ್ತಿತ್ವದಲ್ಲಿತ್ತು ಎಂಬುದನ್ನು ಪರಿಗಣಿಸಿದರೆ, ಈ ಕ್ರಮ ಬ್ರೀಟಿಷರ ಕೊಡುಗೆಯಲ್ಲವೆಂದು ಪರಿಗಣಿಸಬಹುದು. ಕ್ರಿ.ಶ ೧೮ ನೇ ಶತಮಾನದಲ್ಲಿ ಬ್ರೀಟಿಷರು ಭಾರತದಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದರಷ್ಟೆ, ಅಲ್ಲಿ ಅದರ ಭದ್ರತೆಗಾಗಿ ವಿಕೇಂದ್ರಿಕರಣ ವ್ಯವಸ್ಥೆಯನ್ನೇ ಮುಂದುವರೆಸಿ ಸ್ಥಳಿಯ ನಾಯಕರ ಕೈಯಲ್ಲಿಯೆ ಆಡಳಿತೆಯನ್ನು ನೀಡಿದ ಅಂಶ ಸ್ಪಷ್ಟವಾಗುತ್ತದೆ. ಆದರೆ ಪ್ರಾಚೀನ ಕಾಲಕ್ಕಿಂತಲೂ ಆಡಳಿತ ಅಚ್ಚು ಕಟ್ಟತೆಯ ತಳಹದಿಯನ್ನು ಹೊಂದಿತೆನ್ನುವುದು ಸ್ಪಷ್ಟ. ಈ ಅವಧಿಯಲ್ಲಿ ಜನತೆ ಓದು ಬರಹಕ್ಕೆ ಹೆಚ್ಚು ಮಹತ್ವ ಕೊಟ್ಟಿಲ್ಲವೆಂದು ತಿಳಿದು ಬರುತ್ತದೆ. ಆದ್ದರಿಂದ ಬ್ರಿಟಿಷರು ಆಡಳಿತ ನಿರ್ವಹಣೆಗೆಂದು ತಮ್ಮದೆ ಸರಕಾರದ ಪ್ರತಿನಿಧಿಯನ್ನು ನೇಮಿಸುತ್ತಿದ್ದನ್ನು ಕಾಣುತ್ತದೆ. ಇದನ್ನು "ನಕ್ತ ನೇಮಕ"ವೆಂದು ಕರೆಯುತ್ತಿದ್ದರು. ಈ ವ್ಯವಸ್ಥೆಯನ್ನು ಪ್ರಾಚೀನ ಕರ್ನಾಟಕದಲ್ಲಿ ನೇಮಕ ಮಾಡುತ್ತಿದ್ದ ರಾಜ ಪ್ರತಿನಿಧಿ (ರಿಜೆಂಟ್) ಎಂಬ ಪದವಿಗೆ ಹೋಲಿಸಲಾಗಿದೆ.

ಈ ಹನಗಂಡಿ ದೇಸಗತಿಯಲ್ಲಿ ಆಡಳಿತದ ವ್ಯವಸ್ಥೆಯಲ್ಲಿ ಭಾಷೆ, ಕಾನೂನು, ಆಡಳಿತ ಕಡತಗಳ ಪದ್ಧತಿಯಲ್ಲಿ ಹಲವು ಬದಲಾವಣೆಗಳನ್ನು ಕಾಣುತ್ತೆವೆ ಇವರ ಆಡಳಿತದಲ್ಲಿ ಆಂಗ್ಲ ಭಾಷೆಗೆ

ಹೆಚ್ಚಿನ ಪ್ರಾಧಾನ್ಯತೆ ಇದ್ದರೂ ಎಲ್ಲ ದಾಖಲೆಗಳು ಮರಾಠಿಯಲ್ಲಿವೆ, ತಾಲೂಕ ಕಛೇರಿ, ಕೋರ್ಟ, ಪೊಲೀಸ ಮತ್ತು ಸಾರ್ವಜನಿಕ ಆಡಳಿತ ಪದ್ದತಿಯಲ್ಲಿ ಇಂಗ್ಲೀಷ ಭಾಷೆಯನ್ನು ಹೆಚ್ಚಾಗಿ ಬಳಸಲಾಗುತ್ತಿತ್ತು. ದೊರೆತ ಕೆಲವು ಲೆಕ್ಕ ಪತ್ರಗಳು ಕಂದಾಯ ವ್ಯವಸ್ಥೆಯ ದಾಖಲೆಗಳ ಮಾರಾಠಿಯಲ್ಲಿವೆ. ಅವರ ಸಂದರ್ಶನದ ಸಮಯದಲ್ಲಿಯೂ ಕೂಡಾ ಆ ಮನೆತನದವರು ಮರಾಠಿಯ ಕೆಲವು ದಾಖಲೆಗಳನ್ನು ಕೊಟ್ಟರು.

ಹೀಗೆ ಹನಗಂಡಿ ದೇಸಗತಿ (ದೇಸಾಯಿ)ಯವರು ತಮ್ಮ ಸುತ್ತಲಿನ ಪ್ರದೇಶಗಳ ವ್ಯಾಪ್ತಿ ಪಡೆದುಕೊಂಡು ಅವರ ಒಡೆತನಕ್ಕೆ ಸೇರಿದ ಗ್ರಾಮಗಳ ಸಂಖ್ಯೆ ೩೩ ಅವುಗಳನ್ನು ಈ ಕೆಳಗಿನಂತೆ ಕಾಣಬಹುದು.

೧) ಹನಗಂಡಿ
೨) ತಮದಡ್ಡಿ
೩) ಹಳಿಂಗಳಿ
೪) ತೇರದಾಳ
೫) ಗೊಲಬಾವಿ
೬) ಕಾಲತಿಪ್ಪಿ
೭) ರಬಕವಿ
೮) ಮದಲಮಟ್ಟಿ
೯) ಮುಗಳಖೋಡ
೧೦) ಖೇಮಲಾಪೂರ
೧೧) ಹಿಡಕಲ್ಲ
೧೨) ಗುಂಡವಾಡ
೧೩) ಹಂದಿಗುಂದ
೧೪) ಕನದಾಳ
೧೫) ಸಂಕ್ರಟ್ಟಿ
೧೬) ಹಾರೂಗೇರಿ
೧೭) ಸುಲ್ತಾನಪೂರ
೧೮) ಇಟನಾಳ
೧೯) ಕೋಳಿಗುಡ್ಡ
೨೦) ಯಬರಟ್ಟಿ
೨೧) ಬಡಬ್ಯಾಕುಡ
೨೨) ಇಂಗಳಗಾಂವಿ
೨೩) ಖವಟಕೊಪ್ಪ
೨೪) ಸಿರೂರ
೨೫) ಇಂಗಳಗಿ
೨೬) ಶೆಗುನಸಿ
೨೭) ದರೂರ
೨೮) ಮೂಡಲಗಿ
೨೯) ಹಳ್ಳೂರ
೩೦) ಯರಗಟ್ಟಿ
೩೧) ಮುಡಗಿನಹಾಳ
೩೨) ಗುರ್ಲಾಪುರ
೩೩) ಶಿವಾಪೂರ

ಈ ಎಲ್ಲಾ ಗ್ರಾಮಗಳು ಹನಗಂಡಿ ದೇಸಾಯಿಗಳ ಹಿಡಿತದಲ್ಲಿದ್ದವು, ಪರಿಗಣೆವತನ, ಇನಾಂ, ಮಜರೆ ಮೊದಲಾದ ಹಕ್ಕುಗಳನ್ನು ಹೊಂದಿದ್ದರು. ಆರಂಭದಲ್ಲಿ ತೇರದಾಳವನ್ನು ಕೇಂದ್ರವಾಗಿರಿಸಿಕೊಂಡು ತಮ್ಮ ಆಡಳಿತ ಆರಂಭಿಸಿದ ಇವರು ಮುಂದೆ ಹನಗಂಡಿ ಕೇಂದ್ರವನ್ನಾಗಿ ಮಾಡಿಕೊಂಡರು.

## ಹನಗಂಡಿ ದೇಸಾಯಿಯವರ ವಂಶಾವಳಿ












ಈ ಸದರಿ ವಂಶಾವಳಿಯನ್ನುಯ ಹೆಳವರಿಂದ ಪಡೆಯಲಾಗಿದೆ.

## ಹನಗಂಡಿ ದೇಸಾಯಿಯವರ ಬೆಳವಣಿಗೆ

ಇವರ ಮೂಲ ಪುರುಷ ಕೃಷ್ಣಗೌಡ (ಜಿನಪ್ಪಾ) ಈ ವಂಶ ಕ್ರಿ.ಶ. ೧೫೫೦ ರಲ್ಲಿ ಅಸ್ತಿತ್ವಕ್ಕೆ ಬಂದಿತ್ತೆಂದು ಕೆಲವು ದಾಖಲೆಗಳಿಂದ ಹಾಗೂ ದೊರೆತಿರುವ ವಂಶಾವಳಿಯ ಕ್ರಮಾನುಸಾರ ಈ ಮಾಹಿತಿಯನ್ನು ದಾಖಲಿಸಲಾಗಿದೆ. ಕೃಷ್ಣಗೌಡ ದೇಸಾಯಿಯವರು ಬಿಜಾಪೂರದ ಆದಿಲಷಾಹಿಯಿಂದ ಶೂರತನದಿಂದ ಈ ದೇಸಗತಿಯನ್ನು ಸಂಪಾದಿಸಿದನೆಂದು ಹಾಗೂ ಅವರ ಆರಾಧ್ಯ ದೈವವಾದ ತೇರದಾಳ ಅಲ್ಲಮಪ್ರಭು ಹಾಗೂ ಮುಸ್ಲಿಂ ಸಂತನಾದ ಜಿನಗೇ ಷಾನಿಂದ ದೇಸಗತಿಯನ್ನು ಸಂಪಾದಿಸಿದನೆಂದು ತಿಳಿದು ಬರುತ್ತದೆ. ಇವರ ಮೂಲ ವಾಡೆ ತೇರದಾಳವಾಗಿದ್ದು, ಅದು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಪ್ರಮುಖ ಜೈನ ಕೇಂದ್ರವಾಗಿತ್ತು. ನಂತರ ತೇರದಾಳದಿಂದ ಹನಗಂಡಿಯನ್ನು ತಮ್ಮ ಕೇಂದ್ರ ಸ್ಥಾನವನ್ನಾಗಿ ಬಿಜಾಪುರದ ಆದಿಲಷಾನಿಂದ ಪ್ರಾರಂಭದಲ್ಲಿ ಐದು ಹಳ್ಳಿಯ ಇನಾಂವನ್ನು ಪಡೆದ ಕೃಷ್ಣಗೌಡ ಮುಂದೆ ೧೦ ಹಳ್ಳಿ ನಂತರ ೩೩ ಹಳ್ಳಿಗಳ ಇನಾಂವನ್ನು ಪಡೆದನು. ಇವರು ತನ್ನ ಅಧಿಕಾರದ ಅವಧಿಯಲ್ಲಿ ಹನಗಂಡಿಯಲ್ಲಿ ವಾಡೆಯನ್ನು ನಿರ್ಮಿಸಿದರು. ಒಳ್ಳೆಯ ಆಡಳಿತಗಾರನಾದ ಕೃಷ್ಣಗೌಡ ಆದಿಲಷಾಹಿಯಿಂದ ಹುಚ್ಚು ಕುದುರೆಯ ಸರದಾರ ಎಂಬ ಬಿರುದಿನ ಜೊತೆಗೆ "ಬಹುತ್ ಖುಷ ಹೊ ತುಮ ಪಾಗಲ ಘೋಡಾಖಾನ" ಎಂಬ ಬಿರುದನ್ನು ಆದಿಲಷಾಹಿ ನೀಡಿದ್ದನು. ಈ ಹನಗಂಡಿ ದೇಸಾಯಿಯವರು ಜೈನ ಮತಾವಲಂಬಿಗಳಾಗಿದ್ದರೂ ಕೂಡಾ ಅನ್ಯ ಧರ್ಮಿಯರಿಗೆ ಅಷ್ಟೇ ಪ್ರಾಧಾನ್ಯತೆ ಕೊಡುತ್ತಿದ್ದರು. ಯಾವ ಧರ್ಮದವರನ್ನು ಕಡೆಗಣಿಸದೇ ಸಮಾನ ದೃಷ್ಠಿಯಿಂದ ನೋಡಿಕೊಳ್ಳುತ್ತಿದ್ದರು.

ಈ ಮನೆತನದ ಇನ್ನೊಂದು ವೈಶಿಷ್ಟ್ಯವೆಂದರೆ ಕೃಷ್ಣಗೌಡರಿಂದ ಹಿಡಿದು ಸುಮಾರು ೬ನೇ ತಲೆಮಾರುಗಳವರೆಗೆ ಪುತ್ರ ಸಂತಾನವಿಲ್ಲದ ಕಾರಣ ದತ್ತು ಪುತ್ರರನ್ನು ತೆಗೆದುಕೊಂಡ ದೇಸಗತಿ ಈ ದೇಸಾಯಿ ಮನೆತನದಾಗಿದೆ. ಕೃಷ್ಣಗೌಡರ ನಂತರ ಪಾಯಪ್ಪಾ ದೇಸಾಯಿ, ಜಕ್ಕಪ್ಪಾ ದೇಸಾಯಿ, ಮಗೆಪ್ಪ ದೇಸಾಯಿ, ಕೃಷ್ಣಪ್ಪಾ ದೇಸಾಯಿ, ಜಕ್ಕಪ್ಪಾ ದೇಸಾಯಿ, ಅಲ್ಲಪ್ಪಾ ದೇಸಾಯಿ, ಹೀಗೆ ೭ ತಲೆಮಾರಿನ ದೇಸಾಯಿಗಳ ಬಗ್ಗೆ ಅಷ್ಟೊಂದು ಮಾಹಿತಿಗಳು ದೊರಕುವದಿಲ್ಲ. ೭ನೇಯ ತಲೆಯ ಅಲ್ಲಪ್ಪ ದೇಸಾಯಿಯವರ ವಿಧವೆ ಪತ್ನಿ ರುಕ್ಮಿಣಿಬಾಯಿ (ಚಿತ್ರ ಸಂಖ್ಯೆ-೫) ಚಿಕ್ಕ ವಯಸ್ಸಿನಲ್ಲಿಯೇ ಪತಿಯಾದ ಅಲ್ಲಪ್ಪಾ ದೇಸಾಯಿಯನ್ನು ಕಳೆದುಕೊಂಡಳು. ಆಡಳಿತದ ಹೊಣೆಯನ್ನು ತಾವೇ ನಿಭಾಯಿಸಬೇಕಾಯಿತು. ಇವರು ಧೈರ್ಯಕಳೆದುಕೊಳ್ಳದೇ ಆಡಳಿತದ ಚುಕ್ಕಾಣಿ ಹಿಡಿದು ಸಾಮಾಜಿಕ, ಆರ್ಥಿಕ, ಧಾರ್ಮಿಕತೆಯನ್ನು

ಸಮರ್ಥವಾಗಿ ಎದುರಿಸಿದರು. ಎಲ್ಲ ವ್ಯವಹಾರಗಳನ್ನು ಸ್ವಂತ ತಾವೇ ನೋಡಿಕೊಳ್ಳುತ್ತಿದ್ದರು. ಮುಂದೆ ರುಕ್ಮಿಣಿಬಾಯಿಯವರು ದತ್ತಕ ಪುತ್ರನನ್ನು ತೆಗೆದುಕೊಂಡರು. ಅವರೇ ಪಾಯಪ್ಪ ದೇಸಾಯಿ. ಇವರು ೮ನೇ ತಲೆಮಾರಿನವರು. (ಚಿತ್ರ ಸಂಖ್ಯೆ-೪) ಇವರು ಅಥಣಿ ತಾಲೂಕಿನ ಸಪ್ತಸಾಗರದ ನಾಡಗೌಡ ಮನೆತನದವರು, ಇವರು ಕುಸುಮಾವತಿಯನ್ನು ಕೈ ಹಿಡಿದರು. ಇವರು ಪ್ರಜೆಗಳ ಮೇಲೆ ಅಪಾರ ಪ್ರೀತಿ ಉಳ್ಳವರಾಗಿದ್ದರು. ಬಡವರ ಕಷ್ಟ ಕಾರ್ಪಣ್ಯಕ್ಕೆ ಸ್ಪಂದಿಸುತ್ತಿದ್ದರು, ಹಾಗೂ ದೇಸಾಯಿಯವರ ಮನೆತನಕ್ಕೆ ಅಂಟಿಕೊಂಡಿದ್ದ ಪುತ್ರ ಸಂತಾನದ ಕೊರಗನ್ನು ದೂರವಾಗಿಸಿದರು. ಹಲವಾರು ದೇವಾಲಯಗಳ ಪೂಜೆ ಪುನಸ್ಕಾರ ಹಲವಾರು ಪುಣ್ಯ ಕಾರ್ಯ ಮಾಡಿದ್ದರಿಂದ ಪುತ್ರ ಸಂತಾನವಾಯಿತೆಂದು ಹೇಳಲಾಗುತ್ತದೆ. ಈ ದಂಪತಿಗಳಿಬ್ಬರು ಆಡಳಿತದ ಕಡೆಗೆ ಹೆಚ್ಚಿನ ಗಮನ ಹರಿಸಿದರು. ತಮ್ಮ ದೇಸಗತಿಯ ೩೩ ಹಳ್ಳಿಗಳಿಗೂ ತಾವೇ ಹೋಗಿ ಕೆಲಸ ಕಾರ್ಯಗಳನ್ನು ಗಮನಿಸುತ್ತಿದ್ದರು. ಮತ್ತು ರೈತರಿಗೆ ಕಂದಾಯ ಹೆಚ್ಚಾಗದಂತೆ ನೋಡಿಕೊಳ್ಳುತ್ತಿದ್ದರು. ಮುಂದೆ ಪಾಯಪ್ಪಾ ದೇಸಾಯಿಯವರ ನಂತರ ಅಲ್ಲಪ್ಪ ದೇಸಾಯಿ, ಮಗೆಪ್ಪಾ ದೇಸಾಯಿ, ಪರಪ್ಪಾ ದೇಸಾಯಿಯವರು ದೇಸಗತಿಗಳನ್ನು ನೋಡಿಕೊಂಡರು. ಇವರಾದ ನಂತರ ಜಕ್ಕಪ್ಪಾ, ಕೃಷ್ಣಗೌಡಾ, ದಾದಾಸಾಹೇಬ, ಶಂಕರಗೌಡಾ, ಮಗೆಪ್ಪಾ ದೇಸಾಯಿ, ಪರಪ್ಪಾ ದೇಸಾಯಿಯವರು ಮುಂತಾದವರು ಆಡಳಿತವನ್ನು ನಡೆಸಿದರು.

ಈ ಎಲ್ಲ ದೇಸಾಯಿಗಳು ಉತ್ತಮ ಆಡಳಿತದ ಜೊತೆಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ, ವಾಸ್ತು ಶಿಲ್ಪ ಮತ್ತು ಕಂಚು ಕಲೆಗೆ ವಿಶೇಷ ಆಸಕ್ತಿವಹಿಸಿ ಅಧಿಕಾರ ನಡೆಸಿದರು. ಅಲ್ಪ ಪ್ರಮಾಣದ ಸೈನ್ಯವನ್ನು, ಕಂದಾಯ ವಸೂಲಿಗೆ ಕಾರಕೂನರನ್ನು ನೇಮಿಸಿಕೊಂಡಿದ್ದರು. ನ್ಯಾಯದಾನವನ್ನು ಸ್ವಂತ ದೇಸಾಯಿಗಳು ಬಗೆಹರಿಸುತ್ತಿದ್ದರು. ವಾಡೆಯಲ್ಲಿಯೇ ಜೈಲು ಇತ್ತು (ಚಿತ್ರ ಸಂಖ್ಯೆ-೧೧) ಈ ರೀತಿಯಲ್ಲಿ ದೇಸಾಯಿಯವರ ಬೆಳವಣಿಗೆಯನ್ನು ನೋಡಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ಶಿವಲಿಂಗಪ್ಪಾ ಯಲ್ಲಪ್ಪ ಹೆಳವರರವರ ದಾಖಲೆ. (ದೇಸಾಯಿ ಮನೆತನದ ಹೆಳವ)

೨. ಕೃಷ್ಣಗೌಡಾ ಅಲ್ಲಪ್ಪಾ ದೇಸಾಯಿಯವರ ಹೇಳಿಕೆ.

೩. ಡಾ. ಸಂಗಮೇಶ ಕಲ್ಯಾಣಿ – "ಬಾಗಲಕೋಟೆ ಜಿಲ್ಲೆಯ" ದೇಸಗತಿಗಳು
ಕನ್ನಡ ವಿಶ್ವವಿದ್ಯಾಲಯ, ಹಂಪಿ. – ೨೦೦೬. ಪುಟ ಸಂಖ್ಯೆ ೬೦.

೪. ದೇಸಾಯಿ ಪರಗಣ ತೇರದಾಳ ಮರಾಠಿ ದಾಖಲೆ. ಜೂನೆ ಕಾಗದಪತ್ರ.

೫. ಭರ್ಮಪ್ಪ ಧರೆಪ್ಪಾ ಕಿಲ್ಲೆದಾರ ಅವರ ಹೇಳಿಕೆ.

೬. ದು. ನಿಂ. ಬೆಳಗಲಿ. ಜಮಖಂಡಿ ತಾಲೂಕ ದರ್ಶಣ.
ಪ್ರಕಾಶಕರು ಐಬಿಎಚ್ ಗಾಂಧಿ ನಗರ, ಬೆಂಗಳೂರು. – ೧೯೮೬
ಪುಟ ಸಂಖ್ಯೆ : ೨೮

ಅಧ್ಯಾಯ ೩

# ಹನಗಂಡಿ ದೇಸಾಯಿಯವರ ಸಾಂಸ್ಕೃತಿಕ ಕೊಡುಗೆಗಳು

ಪ್ರಾಚೀನ ಕಾಲದಿಂದಲೂ ಕರ್ನಾಟಕವನ್ನಾಳಿದ ಅನೇಕ ರಾಜ ಮನೆತನಗಳು ನಮ್ಮ ಸಂಸ್ಕೃತಿ ಬೆಳವಣಿಗೆಗೆ ಅನೇಕ ಕಾಣಿಕೆಗಳನ್ನು ನೀಡಿವೆ. ಸಂಸ್ಕೃತಿ ಎಂಬುದು ಒಂದು ಕಟ್ಟಡವಲ್ಲ ಅದೊಂದು ಮರವಿದ್ದಂತೆ, ನೂರಾರು ವರ್ಷಗಳ ಕಾಲ ಅದನ್ನು ಬೆಳೆಸಿ ಪೋಷಿಸಿಕೊಂಡು ಬರುವದು ಅತಿ ಮುಖ್ಯವಾಗಿದೆ ಅದರಂತೆ ನಮ್ಮ ಸಂಸ್ಕೃತಿ ಒಮ್ಮಲೇ ಬೆಳೆದು ವಿಕಾಸ ಹೊಂದದೇ ವಿವಿಧ ರಾಜ ಮನೆತನಗಳ ಆಸಕ್ತಿಯ ಪೂರಕವಾಗಿ ಮತ್ತು ರಾಜರ ಪೋಷಣೆಯಿಂದ ಬೆಳೆದುಬಂದ ಫಲವಾಗಿದೆ ಎನ್ನಬಹುದು. ಅದಕ್ಕಾಗಿಯೇ ನಮ್ಮದು ಭವ್ಯ ಸಂಸ್ಕೃತಿ ಎನ್ನಲಾಗಿದೆ ಅದರಂತೆ ರಾಜ ಮಹಾರಾಜರ ಪ್ರತಿರೂಪವೆಂಬತೆ ತಮ್ಮ ಅಧಿಕಾರವನ್ನು ನೆಲೆಗೊಳಿಸಿದ ದೇಸಗತಿಗಳೂ ಕೂಡಾ ಸಂಸ್ಕೃತಿಯನ್ನು ಮುಂದುವರೆಯಿಸಿಕೊಂಡು ಆ ಮೂಲಕ ಪ್ರಜಾರಕ್ಷಣೆ, ಪ್ರಜಾಪಾಲನೆಯನ್ನೇ ತಮ್ಮ ಉಸಿರಾಗಿಸಿಕೊಂಡು ಬಂದ ಕೀರ್ತಿ ಈ ದೇಸಗತಿಗಳದ್ದು, ಅದರಲ್ಲೂ ಹನಗಂಡಿ ದೇಸಾಯಿಗಳ ಕೊಡುಗೆ ಅಪಾರವಾದದ್ದು ಕರ್ನಾಟಕ ಚರಿತ್ರೆ ಸಂಸ್ಕೃತಿಗೆ ಅವರು ನೀಡಿದ ಕೊಡೆಗೆಗಳನ್ನು ಈ ಕೆಳಗಿನಂತೆ ನೋಡಬಹುದು.

## ೧) ಆಡಳಿತ ವ್ಯವಸ್ಥೆ

ಪ್ರಾಚೀನ ಕಾಲದಿಂದಲೂ ಇದ್ದ ಆಡಳಿತ ವ್ಯವಸ್ಥೆಯಲ್ಲಿಯೇ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಹೊರತು ಪಡಿಸಿದರೆ ಉಳಿದಂತೆ ಹಾಗೆಯೇ ಉಳಿದುಕೊಂಡು ಬಂದ ಪರಂಪರೆಯನ್ನು ಗಮನಿಸಬಹುದು ಅಂದಿನ ಆಡಳಿತದ ವ್ಯವಸ್ಥೆಯ ಪ್ರಮುಖ ವಿಭಾಗಗಳಾದ ಜನ, ವಿಶ್, ರಾಷ್ಟ್ರ, ನಾಡು, ಗ್ರಾಮ ಹೀಗೆ ಅನೇಕ ಶಬ್ದಗಳನ್ನು ಕಾಣುತ್ತೇವೆ, ಇವೆಲ್ಲಾ ಆಯಾಕಾಲದ ಆಡಳಿತ ಘಟಕಗಳಾಗಿದ್ದವೆಂಬುದು ವಿಶೇಷವಾಗಿ ಭೋಗಿಕ, ಬೋಗಪತಿ, ರಾಜ್ಯಪಾಲ ಹೀಗೆ ಮುಂತಾದ ಆಡಳಿತ ಘಟಕಗಳ ಅಧಿಕಾರಿಗಳ ಹೆಸರುಗಳೂ ಕೂಡಾ ಶಾಸನಗಳಲ್ಲಿ ಉಲ್ಲೇಖಿತಗೊಂಡಿದ್ದನ್ನು ಅರಿಯಬಹುದು. ಗ್ರಾಮದ ಅಧಿಕಾರಿಯನ್ನು ಗೌಡ, ಗವುಂಡ, ಗ್ರಾಮೀಣಿ ಎಂದು ಮುಂತಾಗಿ ಕರೆಯಲಾಗುತಿತ್ತು. ಕುಟುಂಬ ಹಿರಿಯನಿಗೆ "ಕುಲಪತಿ" ಎಂದು ಹೆಸರಿತ್ತು. ರಾಜರು ಹೋರಾಡಿದ್ದು ಅವರ ಆಡಳಿತ ರಾಜಭಾರ ಕ್ರಮ, ಜೀವನ ಶೈಲಿ, ಧಾನ ಧರ್ಮಗಳಲ್ಲಿ ರಾಜರ ಪಾತ್ರಗಳನ್ನು ಗಮನಿಸಿದರೆ ಅದು ದೇಸಗತಿಗಳಲ್ಲಿಯ

ನಿರಂತರವಾಗಿ ಸಾಗಿಬಂದ ಅಂಶಗಳನ್ನು ಗಮನಿಸಬಹುದಾಗಿದೆ. ಆಧುನಿಕ ಭಾರತದಲ್ಲಿ ಅಂದರೆ ಬ್ರಿಟೀಷ ಭಾರತದಲ್ಲಿ ಈ ದೇಸಗತಿಗಳು ಹೆಚ್ಚೆಚ್ಚು ಕರ್ತವ್ಯ ನಿಷ್ಠೆಯಲ್ಲಿ ತೊಡಗಿದ್ದನ್ನು ಕಾಣಬಹುದು. ಈ ದೇಸಗತಿಗಳು ಮೊದಮೊದಲು ತಮ್ಮದೇ ಆದ ವ್ಯಾಪ್ತಿಯಲ್ಲಿ ತಮ್ಮ ಪ್ರಜೆಗಳ ಸೌಕರ್ಯ ಮತ್ತು ಭದ್ರತೆಗೆ ಹೆಚ್ಚು ಗಮನ ನೀಡಿರಲಿಲ್ಲ ಈ ಪ್ರಭುಗಳನ್ನು ಆಧುನಿಕ ಭಾರತದಲ್ಲಿ ಅಂದರೆ ಬ್ರಿಟೀಷ ಭಾರತದಲ್ಲಿ ಈ ದೇಸಗತಿಗಳು ಹೆಚ್ಚು ಕರ್ತವ್ಯನಿಷ್ಠತೆಯಲ್ಲಿ ತೊಡಗಿದ್ದನ್ನು ಕಾಣಬಹುದು. ತಮ್ಮ ಪ್ರಭುಗಳಿಗೆ ಕಪ್ಪುಕೊಡುವ ಮುಂತಾದ ತೃಪ್ತಿಪಡಿಸುವಲ್ಲಿಯೇ ತಮ್ಮ ಕಾರ್ಯನಿಷ್ಠತೆಯನ್ನು ಮೆರೆದಿದ್ದರು. ಕರ್ನಾಟಕದ ಎಲ್ಲ ದೇಸಗತಿಗಳು ಕೂಡಾ ಯುದ್ಧದಲ್ಲಿ ನಿರತನಾದ ತಮ್ಮ ಪ್ರಭುಗಳಿಗೆ ಅಪಾರ ಕಪ್ಪುಕಾಣಿಕೆ ಕೊಡುವದರಲ್ಲಿಯೇ ನಿರತರಾಗಿದ್ದರು ಇದು ಅಪರೂಪವೆನಿಸಿರಲಿಲ್ಲ. ಈ ದೇಸಗತಿಗಳ ಕರ್ತವ್ಯ ಆಗಿನ ಕ್ರಮವೆಂದು ಪರಿಗಣಿಸಲ್ಪಟ್ಟಿತ್ತು. ಅಂದಿನ ದೇಸಗತಿಗಳು ಸಂಸ್ಥಾನಗಳು ಧನ ಸಂಗ್ರಹಕ್ಕೆ ಹೆಚ್ಚಿನ ಆದ್ಯತೆ ನೀಡಿದಂತೆ ತೋರುತ್ತದೆ.

ದೇಸಗತಿಯಾಗಲಿ ಅಥವಾ ಸಂಸ್ಥಾನಗಳಾಗಲಿ ಪ್ರಜಾಕರ್ಷಣಿಯರಾಗಿಯೂ, ಪ್ರಜಾಹಿತಾಕಾಂಕ್ಷಿಯಾಗಿಯೂ ನಡೆದುಕೊಂಡು ಪ್ರಜೆಗಳ ಸಮಸ್ಯೆಗಳಿಗೆ ಸ್ಪಂದಿಸಿ ಅವರಿಗೆ ನ್ಯಾಯ, ಶಾಂತಿ, ಸುವ್ಯವಸ್ಥೆಯ ಜೀವನ ಒದಗಿಸುವದು ಈ ದೇಸಗತಿಗಳ ಪ್ರಮುಖ ಉದ್ದೇಶಗಳಾಗಿವೆ.

ದೇಸಗತಿಯ ಮಾಲಿಕನನ್ನು ರಾಜನಿಗೆ ಹೋಲಿಸಬಹುದು. ಆದರೆ ರಾಜನಿಗೆ ಇದ್ದ ಪರಮಾಧಿಕಾರತ್ವಗಳು ಮಾತ್ರ ಈತನಿಗಿರಲಿಲ್ಲ. ಈತನು ತಮ್ಮ ಒಡೆಯ ಹಾಕಿಕೊಟ್ಟ ಮುಖ್ಯ ಆಡಳಿತಗಾರನಷ್ಟೆ ಎನ್ನಬಹುದು. ಆದರೂ ರಾಜಸಂಪ್ರದಾಯಗಳೇ ಇವರಲ್ಲಿದ್ದವು. ಇವರ ಮುಖ್ಯ ಕರ್ತವ್ಯಗಳೆಂದರೆ ತಮಗೆ ಹಾಕಿ ಕೊಟ್ಟ ವತನ ಭೂಮಿಗಳನ್ನು ರೈತರಿಗೆ ಊಳಲು ನೀಡಿ ಅವರಿಂದ ನಿಗದಿಪಡಿಸಿದ ಕಂದಾಯವನ್ನು ಧಾನ್ಯ ಅಥವಾ ಹಣದ ರೂಪದಲ್ಲಿ ವಸೂಲಿ ಮಾಡುವ ಹಕ್ಕು ತಮ್ಮ ಪ್ರದೇಶದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಸ್ಥಾಪಿಸಿ ಜನರಿಗೆ ರಕ್ಷಣೆ ನೀಡುವುದು ಇವರ ಮುಖ್ಯ ಕರ್ತವ್ಯಗಳಾಗಿದ್ದವು.

ಇವರ ಆಧೀನಕ್ಕೊಳಪಟ್ಟ ಗ್ರಾಮಗಳನ್ನು "ಚಾವರಾತ್" ಎನ್ನುತ್ತಿದ್ದರು. ಅಂತಹ ಗ್ರಾಮಗಳು ಹನಗಂಡಿ ದೇಸಾಯಿಗಳ ವ್ಯಾಪ್ತಿಯಲ್ಲಿದ್ದವು. ಅಲ್ಲಿಂದ ಪ್ರತಿ ವರ್ಷ ನಿಗದಿಪಡಿಸಿದ ಬಾಬು ವಸೂಲಿಯಾಗುತ್ತಿತ್ತು. ಇವುಗಳಲ್ಲಿ ದೇಸಾಯಿ, ಪಾಟೀಲ, ಕುಲಕರ್ಣಿ, ಕೋತ್ವಾಲ ಹೀಗೆ ಅನೇಕ

ಬಾಬುಗಳು ಈ ದೇಸಾಯಿಗಳಿಗಿದ್ದವು ಎಂದು ತಿಳಿದು ಬರುತ್ತದೆ. ಈ ಕಾರ್ಯದಲ್ಲಿ ಪಾಟೀಲ, ಕುಲಕರ್ಣಿ, ಗೌಡ, ಶಾನುಭೋಗ, ಕೋತ್ವಾಲ, ತಳವಾರ ಅನೇಕ ನೌಕರರು ದೇಸಗತದ ಸೇವೆಯಲ್ಲಿದ್ದರು. ಬ್ರಿಟೀಷ ಭಾರತದಲ್ಲಿ ಹನಗಂಡಿ ದೇಸಾಯಿಗಳಿಗೆ ಸ್ಥಾನಮಾನಗಳಿದ್ದವೆಂದು ತೋರುತ್ತದೆ. ಬಾಂಬೆ ಪ್ರಾಂತದಲ್ಲಿ ಈ ದೇಸಗತವು ವಿಶಿಷ್ಟ ಸ್ಥಾನ ಪಡೆದಿತ್ತು.

## ಉತ್ತರಾಧಿಕಾರತ್ವ

ಉತ್ತರಾಧಿಕಾರತ್ವದ ವಿಷಯದಲ್ಲಿಯೂ ಕೂಡಾ ಪ್ರಾಚೀನ ಕಾಲದ ಪದ್ಧತಿಯನ್ನೆ ಕಾಣುತ್ತೇವೆ. ದೇಸಾಯಿಯ ಹಿರಿಯ ಮಗನೇ ದೇಸಗತದ ಉತ್ತರಾಧಿಕಾರಿಯಾಗಿರುತ್ತಾನೆ. ಈ ಹಿಂದಿನ ಅರಸು ಮನೆತನದಲ್ಲಿಯೂ ಇದನ್ನೇ ಕಾಣುತ್ತೇವೆ. ರಾಜನ ಹಿರಿಯ ಮಗನೆ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಿರುತ್ತಿದ್ದನು, ಅದು ವಂಶಪರಂಪರ್ಯವಾಗಿರುತಿತ್ತು.

ದೇಸಾಯಿಗಳ ಪತ್ನಿಯರನ್ನು ಪಟ್ಟದ ಸತಿ ಎಂದು ಕರೆಯಲಾಗುತಿತ್ತು. ಹಿರಿಯ ಮಗನಿಗೆ ದೇಸಗತದ ಉತ್ತರಾಧಿಕಾರತ್ವ ದೊರೆಯುತಿತ್ತು ಉಳಿದ ಸೋದರರಿಗೆ ಇಲ್ಲಿ ಅಧಿಕಾರ ನಡೆಸಲು ಅವಕಾಶ ಇರುತ್ತಿರಲಿಲ್ಲಾ, ಆದರೆ ಜಮೀನಿನ ಕೆಲವು ಭಾಗವನ್ನು ಮಾತ್ರ ಸೋದರರಿಗೆ ನೀಡಿ ಉಪಜೀವನಕ್ಕೆ ಮಾರ್ಗಮಾಡಿಕೊಡಲಾಗಿತ್ತು. ಕೆಲವು ಸಾರಿ ಹಿರಿಯ ಪತ್ನಿಗೆ ಗಂಡು ಮಕ್ಕಳು ಆಗದೇ ಇದ್ದರೆ ಮತ್ತೊಂದು ಮದುವೆ ಮಾಡಿಕೊಳ್ಳವ ವಾಡಿಕೆ ಇತ್ತು ಭಾರತೀಯ ಸಂಪ್ರದಾಯದ ಪ್ರಕಾರ ಗಂಡು ಮಕ್ಕಳೇ ಆಸ್ತಿಯ ಉತ್ತರಾಧಿಕಾರಿಗಳಾಗಿರುತ್ತಿದ್ದರು. ಇಂಗ್ಲೆಂಡಿನಲ್ಲಿ ಹಿರಿಯ ಮಗು ಹೆಣ್ಣಿರಲಿ ಅಥವಾ ಗಂಡಿರಲೀ ಅವಳು ಅಥವಾ ಅವನು ರಾಜ ರಾಣಿಯಾಗಿ ಅಧಿಕಾರವಹಿಸಿಕೊಳ್ಳುತ್ತಾರೆ ಈ ಪದ್ದತಿ ಇಂದಿಗೂ ಜಾರಿಯಲ್ಲಿದೆ.

ಒಂದು ವೇಳೆ ದೇಸಾಯಿಗಳು ಗಂಡು ಮಕ್ಕಳನ್ನು ಹೊಂದದೇ ಇದ್ದರೆ ಅಥವಾ ಅಷ್ಟರಲ್ಲಿ ಮರಣ ಹೊಂದಿದರೆ, ದತ್ತಕ ತೆಗೆದುಕೊಳ್ಳುವ ವಾಡಿಕೆ ಇತ್ತು. ಆದರೆ ಹನಗಂಡಿಯ ದೇಸಾಯಿ ಮನೆತನದಲ್ಲಿ ಎಂಟನೇ ತಲೆಮಾರಿನವರಿಗೆ ಪುತ್ರ ಸಂತಾನವಿಲ್ಲದೇ ದತ್ತಕ ತೆಗೆದುಕೊಂಡಿದ್ದನ್ನು ಕಾಣುತ್ತೇವೆ.

ಹನಗಂಡಿ ದೇಸಾಯಿಯವರು ಎಂಟನೇಯ ಮಾಲಿಕ ಪಾಯಪ್ಪಾ ದೇಸಾಯಿ ಇತನನ್ನು ಸಪ್ತಸಾಗರದ ನಾಡಗೌಡ ಮನೆತನದಿಂದ ದತ್ತಕ ತೆಗೆದುಕೊಂಡರು, ಮುಂದೆ ಪುತ್ರ ಸಂತಾನ

ಪ್ರಾಪ್ತವಾಗಲೂ ಪ್ರಾರಂಭವಾಯಿತು. ಮುಂದೆ ದತ್ತಕ ತೆಗೆಡುಕೊಳ್ಳವ ಪ್ರಸಂಗವೇ ಬರವುದಿಲ್ಲ.

ಹೀಗೆ ಹಿರಿಯ ಮಗನಿಗೆ ಪಟ್ಟಗಟ್ಟಿ ಉಳಿದ ಮಕ್ಕಳಿಗೆ ಆಸ್ತಿಯ ಕೆಲವು ಭಾಗಗಳನ್ನು ನೀಡಲಾಗುತಿತ್ತು ಇದನ್ನು "ಮೋಟಗೆ" ಎಂದು ಕರೆಯಲಾಗುತಿತ್ತು. ಇದನ್ನು ಪಡೆದ ಸೋದರರು "ಬಿರಾದಾರ" ಎಂದು ಕರೆಯಿಸಿಕೊಳ್ಳುತ್ತಿದ್ದರು. ಈ ಪೋಟಗೆ ಭೂಮಿಯು ತಂದೆಯಿಂದ ಮಕ್ಕಳಿಗೆ ವಂಶಪಾರಂಪರ್ಯವಾಗಿ ಬರುತ್ತಿತ್ತು. ಈ ಭೂಮಿಯನ್ನು ಕೊಟ್ಟ ಮಾಲಿಕನಿಗೂ ಅಂದರೆ ಹಿರಿಯ ದೇಸಾಯಿ ವಾಪಸ್ ತೆಗೆದುಕೊಳ್ಳಲೂ ಬರುತ್ತಿರಲಿಲ್ಲ. ಪೋಟಗೆ ಹೊಂದಿದವರು ಮಕ್ಕಳು ಮೊಮ್ಮಕಳು ಆಸ್ತಿ ಬೋಗಿಸುವ ಹಕ್ಕಿದ್ದರೂ ಕೂಡಾ ಅವರು ಈ ಭೂಮಿಯ ಮಾಲಿಕರಾಗಿರಲಿಲ್ಲ. ಈ ಭೂಮಿಯಲ್ಲಾ ಮಾಲಿಕನ ಹೆಸರಿನಲ್ಲಿಯೇ ಇರುತಿತ್ತು. ಇದನ್ನು ಮಾರಲು ಅಥವಾ ಅನ್ಯರ ಹೆಸರಿಗೆ ಹಸ್ತಾಂತರಿಸಲು ಬರುತ್ತಿರಲಿಲ್ಲ. ಒಂದು ವೇಳೆ ಪೋಟಗೆ ಭೂಮಿಯು ಅವನ ಜೀವನಕ್ಕೆ ಸಾಕಾಗದಿದ್ದರೆ ಮತ್ತಷ್ಟು ಭೂಮಿ ನೀಡುವಂತೆ, ಕೇಳಲುಬಹುದು ಆದರೆ ಕೊಡುವದು ಅಥವಾ ಬಿಡುವದು ಮಾಲಿಕನ ಇಚ್ಛೆಗೆ ಸಂಬಂಧಿಸಿದ್ದು, ಹೀಗೆ ದೇಸಗತದ ಆಡಳಿತದ ವ್ಯವಸ್ಥೆಯು ಜೇಷ್ಟ ಮತ್ರಾಧಿಕಾರತ್ವದ ಮೇಲೆ ರೂಪಿತಗೊಂಡಿತ್ತು.

## ಪಟ್ಟಮಹೋತ್ಸವ

ಪ್ರಾಚೀನ ಕಾಲದ ಅರಸು ಮನೆತನಗಳಲ್ಲಿ ಪಟ್ಟಮಹೊತ್ಸವ ಸಮಾರಂಭವು ಅತ್ಯಂತ ವಿಜೃಂಬನೆಯಿಂದ ನಡೆಯುತಿತ್ತು. ಆ ಸಂದರ್ಭದಲ್ಲಿ ಸುತ್ತಲಿನ ಅಧೀನ ನಾಯಕರು ರಾಜನಿಗೆ ಅಪಾರ ಕಾಣಿಕೆ ನೀಡಿ ಅವರ ಪ್ರೀತಿಗೆ ಪಾತ್ರರಾಗುತ್ತಿದ್ದರು. ಅದರಂತೆಯೇ ದೇಸಗತಿಗಳಲ್ಲಿಯೂ ಆ ಸಂಪ್ರದಾಯ ಮುಂದುವರೆದುಕೊಂಡು ಬಂದಿತು. ದೇಸಾಯಿಯರು ತಮ್ಮ ಹಿರಿಯ ಮಗನಿಗೆ ಪಟ್ಟ ವಹಿಸಿಕೊಡುವಾಗ ಅನೇಕ ಸಂಪ್ರದಾಯಗಳನ್ನು ಪಾಲಿಸುತ್ತಿದ್ದರು. ಅವರ ತಲೆಯ ಮೇಲಿನ ಪೇಟಾವನ್ನು ತೆಗೆದು ಹಾಕಿ ಪಟ್ಟಾಧಿಕಾರಿಯಾಗುವವನಿಗೆ ಹಾಕಿ ಕೈಯಲ್ಲಿ ಖಡ್ಗನೀಡಿ, ಕಡಗ ತೋಡಿಸಿ ಕೊರಳಲ್ಲಿ ಬಂಗಾರದ ಒಡವೆಗಳನ್ನು ಹಾಕಿ ಗಾದಿಯ ಮೇಲೆ ಕೂಡಿಸುತ್ತಿದ್ದರು. ಇದನ್ನು "ಗದ್ದಿನಿಷನಿ" ಎಂದು ಕರೆಯುತ್ತಿದ್ದರು. ಈ ಸಂದರ್ಭದಲ್ಲಿ ಪುರೋಹಿತರಿಂದ ಮಂತ್ರ ಘೋಷಣೆ ಮಾಡಿಸಿ ಧಾರ್ಮಿಕ ವಿಧಿವಿಧಾನಗಳ ಮೂಲಕವೇ ಈ ಪಟ್ಟ ಮಹೋತ್ಸವವನ್ನು ಆಚರಿಸಲಾಗುತ್ತಿತ್ತು. ಪುತ್ರನು ಗಾದಿ ಏರಿದ ನಂತರ ದೇಸಗತದ ಮುದ್ರೆಯನ್ನು ಆತನಿಗೆ ಒಪ್ಪಿಸಲಾಗುತ್ತಿತ್ತು. ಈ ಸಂದರ್ಬದಲ್ಲಿ ಸುತ್ತಲಿನ ಅಂದರೆ,

ದೇಸಗತಿಗೆ ಒಳಪಟ್ಟ ಪ್ರದೇಶದ ಎಲ್ಲ ಗ್ರಾಮಸ್ಥರು ಮತ್ತು ಆಹ್ವಾನಿತರು ಉಪಸ್ಥಿತರಿರುತ್ತಿದ್ದರು. ಹಿಂದೆ ರಾಜ ಮಹಾರಾಜರ ಕಾಲದಲ್ಲಿ ಸಾಮಂತರು, ನಾಗರಿಕರೂ ಈ ಸಂದರ್ಭದಲ್ಲಿ ತಮ್ಮ ಕಾಣಿಕೆಯನ್ನು ಅರ್ಪಿಸುತ್ತಿದ್ದರು. ಸಾಮಂತರು ರಾಜನಿಗೆ ತಮ್ಮ ನಿಷ್ಠೆಯನ್ನು ವ್ಯಕ್ತಪಡಿಸಗೋಸ್ಕರವೇ ಕಪ್ಪುಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಆದರೆ "ಅಹೇರ" ಎಂದು ಕರೆಯಲ್ಪಡುವ ಕಾಣಿಕೆಯನ್ನು ಗ್ರಾಮಸ್ಥರು ಈ ದೇಸಾಯಿಗಳಿಗೆ ಅರ್ಪಿಸುತ್ತಿದ್ದರೆಂದು ತಿಳಿದು ಬರುತ್ತದೆ. ಜಕ್ಕಪ್ಪ ದೇಸಾಯಿ (ಕೃಷ್ಣಗೌಡಾ) ಈ ಮನೆತನದ ಮೂಲ ಪುರುಷ, ಇವರ ಪಟ್ಟ ಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆದಿತ್ತೆಂದು ತಿಳಿದು ಬರುತ್ತದೆ.(೧)

ಹನಗಂಡಿ ದೇಸಾಯಿ ಮನೆತನದ ಪಟ್ಟ ಮಹೋತ್ಸವಗಳು ವಿಜೃಂಬನೆಯಿಂದ ನಡೆಯುತ್ತಿದ್ದವು. ಈ ಸಂದರ್ಭದಲ್ಲಿ ಈ ಮನೆತನಕ್ಕೆ ಸಂಬಂಧಪಟ್ಟ ಪ್ರತಿನಿಧಿಗಳು ಉಪಸ್ಥಿತರಿರುತ್ತಿದ್ದರೆಂದು ತಿಳಿದುಬರುತ್ತದೆ. ಇವರ ಮನೆತನದಲ್ಲಿ ಯಾವುದೇ ಸಮಾರಂಭಗಳು ನೇರವೇರಲಿ ಆ ಸಮಯದಲ್ಲಿ ಕೈಯಲ್ಲಿ ಖಡ್ಗ, ಕಡಗ, ಪೇಟಾ ಹಾಗೂ ವಿವಿಧ ಮಂತ್ರ ಘೋಷಗಳ ಮಧ್ಯ ಸಮಾರಂಭವನ್ನೆರ್ಪಡಿಸುತ್ತಿದ್ದರು. ಈ ಸಮಯದಲ್ಲಿ ಉಪಸ್ಥಿತರಿದ್ದ ಎಲ್ಲರಿಗೂ ಮತ್ತು ಬಡವರಿಗೂ ಅಪಾರ ಧಾನ ಧರ್ಮಗಳನ್ನು ನೀಡಲಾಗುತ್ತಿತ್ತೆಂದು ತಿಳಿದು ಬರುತ್ತಿದೆ.(೨)

## ಅಧಿಕಾರಿಗಳು

ಹನಗಂಡಿ ದೇಸಾಯಿಗಳು ಆದಿಲ್‌ಷಾಹಿ ಮನೆತನದ ನಂತರ ಸಾಂಗಲಿ ಸಂಸ್ಥಾನಕ್ಕೆ ನಿಷ್ಠರಾಗಿದ್ದರು, ಪ್ರತಿ ವರ್ಷ ಅವರಿಗೆ ಕಪ್ಪುಕಾಣಿಕೆ ಅರ್ಪಿಸುತ್ತಿದ್ದರು. ವತನ ಪ್ರದೇಶದಲ್ಲಿ ಕಂದಾಯ ವಸೂಲಿ ಮಾಡಿ ಕೆಲವು ಭಾಗವನ್ನು ಚಕ್ರಾದಿಪತ್ಯಕ್ಕೆ ನೀಡತ್ತಿದ್ದರೆಂದು ತೊರುತ್ತದೆ. ಈ ದೇಸಗತಿಗಳ ಆಡಳಿತಾಧಿಕಾರಿಗಳು ಆಯಾ ದೇಸಗತಿಯ ಆಡಳಿತ ಪದ್ಧತಿಯ ಮೇಲೆಯೇ ವರ್ಗಿಕರಣಗೊಂಡಿದ್ದನ್ನು ಕಾಣಬಹುದು. "ದೇಸಗತಿ" ಅಥವಾ "ಪರಗಣ ವತನ" ಎಂದು ಕರೆಯಲ್ಪಡುವ ೩೩ ಗ್ರಾಮಗಳ ಸಮೂಹದ ಮೇಲ್ವಿಚಾರಣಾ ಆಡಳಿತದ ಹಕ್ಕು ಈ ದೇಸಾಯಿಯವರದ್ದಾಗಿತ್ತು. ಈ ದೇಸಗತದ ಆಡಳಿತವನ್ನು ದೇಸಾಯಿ, ನಾಡಗೌಡ, ಕುಲಕರ್ಣಿ, ದೇಶಪಾಂಡೆ ಹಾಗೂ ಇತರ ಅಧಿಕಾರಿಗಳ ಸಹಾಯದಿಂದ ನಡೆಸುತ್ತಿದ್ದರು. ಈ ಅಧಿಕಾರಿಗಳಿಗೆ ನೆರವಾಗಲು ಪ್ರತಿ ಹಳ್ಳಿಗಳಿಗೆ ಪಾಟೀಲ, ಕುಲಕರ್ಣಿ, ತಳವಾರ ಮೊದಲಾದ ಬಾರಾಬಲೂತಿ ಹಕ್ಕು ಹೊಂದಿದ ವತನದಾರರ ನೆರವಿನೊಂದಿಗೆ ದೇಸಗತಿಯ

ಎಲ್ಲ ಆಡಳಿತವನ್ನು ನಿರ್ವಹಿಸಲಾಗುತಿತ್ತು. ಇವರಲ್ಲಿ ಕೆಲವರ ಕರ್ತವ್ಯಗಳನ್ನು ಹೇಳಬೇಕೆಂದರೆ ಗ್ರಾಮಗಳಲ್ಲಿ ಶಾಂತಿ–ಸುವ್ಯವಸ್ಥೆ ಮತ್ತು ರಕ್ಷಣೆ ಮಾಡುವ ಕಾರ್ಯವನ್ನು ಪೋಲೀಸ ಪಾಟೀಲನು ನಿರ್ವಹಿಸುತ್ತಿದ್ದರು, ಈತನಿಗೆ ಮದ್ಯಯುಗದಲ್ಲಿ ಕೊತ್ವಾಲನೆಂದು ಕರೆಯುತ್ತಿದ್ದರು. ಕಂದಾಯ ವಸೂಲಿಗ್ಯೆಯುವ ಕಾರ್ಯವನ್ನು ಪಾಟೀಲನು, ಕುಲಕರ್ಣಿಯು ಜಮೀನುಗಳ ಲೆಕ್ಕ ಪತ್ರ ಮತ್ತು ಕಂದಾಯ ವಸೂಲಿಗ್ಯೆಯುವ ಲೆಕ್ಕ ಪತ್ರಗಳನ್ನು ನಿರ್ವಹಿಸುವ ಅಧಿಕಾರಿಗಳನ್ನು ಹೊಂದಿದ್ದನು. ವಾಡೆಯಲ್ಲಿ ಪ್ರತ್ಯೇಕವಾದ ಲೆಕ್ಕ ಪತ್ರಗಳನ್ನು ಹಾಗೂ ಕಂದಾಯವನ್ನು ವಸೂಲಾತಿಗಾಗಿ ಕಛೇರಿ ಇತ್ತು. (ಚಿತ್ರ ಸಂಖ್ಯೆ–೩) ವಾಲಿಕಾರನು ರೈತರು ಕೊಡಬೇಕಾದ ತಲಾವಾರು ತೆರಿಗೆಯ ಪಟ್ಟಿಯನ್ನು ಪಡೆದು ತೆರಿಗೆ ವಸೂಲಿಗ್ಯೆಯುವ ಕಾರ್ಯವನ್ನು ನಿರ್ವಹಿಸುತ್ತಿದ್ದನು.

ಅದರಂತೆ ಮಹಾರ (ಹರಿಜನ)ರು ಊರಿನ ಸ್ವಚ್ಛತೆ ಮತ್ತು ರಕ್ಷಣೆಗ್ಯೆಯುವ ಕಾರ್ಯ ಮಾಡುತ್ತಿದ್ದರು. ಮಹಾರರಿಗೂ ಮೇಲಿನ ಅಧಿಕಾರಿಗಳೆಲ್ಲಾ ವತನನನ್ನು ಬಿಟ್ಟು ಕೊಡಲಾಗಿತ್ತು. ಈ ವತನೀ ಭೂಮಿಗೆ ಅವರು ಪೂರ್ಣ ಪ್ರಮಾಣದ ತೆರಿಗೆಯನ್ನು ತುಂಬಬೇಕಾಗಿರಲಿಲ್ಲಾ. ಕೇವಲ ಸರ್ಕಾರ ನಿಗಡಿಪಡಿಸಿದ "ಜೂಡಿ" ಎಂಬ ಕಡಿಮೆ ಮೊತ್ತದ ಹಣವನ್ನು ತುಂಬುತ್ತಿದ್ದರು.

ಉತ್ತರ ಕರ್ನಾಟಕದಲ್ಲಿರುವ ಇಂತಹ ಅನೇಕ ದೇಸಗತಿಗಳು ಬಿಜಾಪೂರದ ಆದೀಲ್‌ಷಾಹಿಗಳ ಕಾಣಿಕೆ ಎಂದು ನಾವು ಈಗಾಗಲೇ ನೋಡಿದ್ದಾಗಿದೆ. ಇವುಗಳು ಆತನ ಆಧೀನದಲ್ಲಿಯೇ ಕಾರ್ಯ ನಿರ್ವಹಿಸುತ್ತಿದ್ದವು. ವಿವಿಧ ಕ್ಷೇತ್ರಗಳಲ್ಲಿ ಆದಿಲ್‌ಷಾಹಿ ರಾಜ್ಯಕ್ಕೆ ಅಪೂರ್ವ ಸೇವೆಸಲ್ಲಿಸಿದಂತವರಿಗೆ ಮತ್ತು ನಿಷ್ಟರಿಗೆ ಈ ವತನೀ ಅಧಿಕಾರವನ್ನು ನೀಡಲಾಗಿತ್ತು. ಬಹುಮನಿಗಳ "ತರಫ್" ಎಂಬ ಪ್ರಾಂತವಿಭಾಗಗಳಿದ್ದವು ಮುಂದೆ ಆದಿಲ್‌ಷಾಹಿಗಳ ಕಾಲದಲ್ಲಿ "ತರಫ್" ಮತ್ತು "ತರಫ್‌ದಾರ" ಎಂದು ಬದಲಾವಣೆಗೊಂಡು ಜಾಗೀರ ಮತ್ತು ಜಾಗೀರದಾರ ಎಂಬ ಪದವಿಗಳು ಬಳಕೆಗೆ ಬಂದವೆಂದು ಹೇಳಬಹುದು. ತುಂಗಭದ್ರಾ ನದಿಯ ದಕ್ಷಿಣ ಭಾಗಗಳು ವಿಜಯನಗರದ ಆಳ್ವಿಕೆಗೊಳಪಟ್ಟಿದ್ದರಿಂದ ಅಲ್ಲಿಯ ಸ್ಥಳೀಯ ಪಾಳೆಗಾರರಿಗೆ ಆಡಳಿತ ನಿರ್ವಹಣೆಯನ್ನು ಬಿಟ್ಟು ಕೊಟ್ಟು ಅವರು ನಿಗದಿಪಡಿಸಿದ ಕಪ್ಪುವನ್ನು ಸಾಮ್ರಾಜ್ಯಕ್ಕೆ ಅರ್ಪಿಸುತ್ತಿದ್ದರು. ತಮ್ಮ ಪ್ರಭುತ್ವಕ್ಕೊಳಪಟ್ಟ ಪ್ರದೇಶಗಳನ್ನು ಹಲವು ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಅವುಗಳನ್ನು ಸರಕಾರ ಪರಗಣ ಮುಂತಾಗಿ ವಿಭಾಗಿಸಲಾಗಿತ್ತು. ಈ ಒಂದು ದೇಸಗತಿಯ ಸರ್ಕಾರದಲ್ಲಿಯೂ ನಾಲ್ಕು ಜನ ಅಧಿಕಾರಿಗಳಿರುತ್ತಿದ್ದರು. ಅವರಲ್ಲಿ ಒಬ್ಬ ಕಂದಾಯ

ವಸೂಲಿಗಾರ ಮತ್ತೊಬ್ಬ ಲೆಕ್ಕಿ ಪತ್ರಗಳನ್ನು ಇಡುವವನು ಹಾಗೂ ಇಬ್ಬರೂ ಹಿಂದೂ ಅಧಿಕಾರಿಗಳು ಇರುತ್ತಿದ್ದರು. ಸರಕಾರದ ಮುಖ್ಯಸ್ಥನಿಗೆ ದರಹವಾಲ್ದಾರ ಮತ್ತು ಸುಭೇದಾರ ಎಂದು ಕರೆಯುತ್ತಿದ್ದರು. ನಾಲ್ಕನೆಯ ಅಧಿಕಾರಿಯೇ ಖಾಜಿಯಾಗಿರುತ್ತಿದ್ದನು. ಕೋತ್ವಾಲ, ದೇಶಮುಖ, ದೇಸಾಯಿ ಎಂಬ ಅಧಿಕಾರಿಗಳು ಪರಗಣದಲ್ಲಿ ಇರುತ್ತಿದ್ದರು. ಆಯಾ ಪರಗಣದ ಕಂದಾಯ ವ್ಯವಸ್ಥೆಯಲ್ಲವೂ ಇವರ ನಿಯಂತ್ರಣದಲ್ಲಿದ್ದವು. (೩)

ಪರಗಣಾವತನವು ಹಲವು ಹಳ್ಳಿಗಳ ಸಮೂಹವಾಗಿದ್ದಿತ್ತು ಅಂದರೆ, ಹನಗಂಡಿಯಲ್ಲಿ ವಾಸಿಸುತ್ತಿದ್ದ ಈ ದೇಸಾಯಿಗಳ ಹಿಡಿತದಲ್ಲಿ ಸುಮಾರು ೩೩ ಗ್ರಾಮಗಳಾಗಿದ್ದವು, ಆಡಳಿತ ವ್ಯವಸ್ಥೆಯ ಅತಿ ಚಿಕ್ಕ ಘಟಕಗಳಾಗಿದ್ದವು. ಹನಗಂಡಿಯಿಂದ ಈ ದೇಸಾಯಿಗಳು ಅಧಿಕಾರಿಗಳ ಮುಖೇನ ಈ ಗ್ರಾಮಗಳ ಆಡಳಿತವನ್ನು ನಿರ್ವಹಿಸುತ್ತಿದ್ದರು. ಸ್ಥಳಿಯವಾಗಿ ಗ್ರಾಮಗಳ ಪಂಚಾಯಿತಿಗಳು ಗ್ರಾಮಾಡಳಿತವನ್ನು ನಿರ್ವಹಿಸುತ್ತಿದ್ದವು. ಗ್ರಾಮದ ಮುಖ್ಯಸ್ಥನು "ಗೌಡ" ನಾಗಿರುತ್ತಿದ್ದನು ಆದರೆ ಅಧಿಕಾರಿಗಳಾರು ಈ ಗ್ರಾಮಾಡಳಿತದಲ್ಲಿ ತಲೆಹಾಕುತ್ತಿರಲಿಲ್ಲ ಗ್ರಾಮಗಳಲ್ಲಿಯೂ ಕೂಡಾ ಪಾಟೀಲ, ಪೋಲೀಸ್‌ಪಾಟೀಲ ಮೊದಲಾದ ಅಧಿಕಾರಿಗಳು ನ್ಯಾಯ ಮತ್ತು ಕಂದಾಯಗಳ ವ್ಯವಹಾರ ನೋಡಿಕೊಳ್ಳುತ್ತಿದ್ದರು, ಇಲ್ಲಿ ಲೆಕ್ಕ ಪತ್ರ ಕುಲಕರ್ಣಿಯು ನೋಡಿಕೊಳ್ಳತ್ತಿದ್ದನು. ಇಲ್ಲಿ ಚೌಕಿದಾರರೆಂದು ಕರೆಯುವ ಕಾವಲುಗಾರರು ಇದ್ದರೂ. ಇವರೆಲ್ಲ ತಮ್ಮ ಸೇವೆಯ ಪ್ರತಿಫಲವಾಗಿ ಇನಾಂವನ್ನು ಪಡೆಯುತ್ತಿದ್ದರು.

ಗ್ರಾಮಗಳ ಈ ನಾಯಕರು ತಮ್ಮ ಕುಂದು ಕೊರತೆಗಳನ್ನು ನಿಗದಿ ಪಡಿಸಿದ ಸಂದರ್ಭದಲ್ಲಿ ಈ ದೇಸಾಯಿಗಳಿಗೆ ನಿವೇದಿಸಿಕೊಳ್ಳುತ್ತಿದ್ದರು ಹಾಗೂ ಕೆಲವೊಂದು ಸಂದರ್ಭದಲ್ಲಿ ಸ್ವಂತ ತಾವೇ ಗ್ರಾಮಗಳಿಗೆ ಬೇಟಿಕೊಟ್ಟು ಸಮಸ್ಯೆಗಳನ್ನು ಪರಿಹರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಇವರು ಜನಸಾಮಾನ್ಯರೊಂದಿಗೆ ಬೆರೆತು ಅವರ ಜೊತೆಗೆ ಸ್ಪಂದಿಸುತ್ತಿದ್ದರು.

### ಸಿಪಾಯಿಗಳು

ಬ್ರಿಟಿಷರು ಭಾರತಕ್ಕೆ ಬಂದ ಮೇಲೆ ಸರಕಾರದಿಂದಲೇ ನೇಮಿಸಲ್ಪಟ್ಟ ಕೆಲವು ಸಿಪಾಯಿಗಳಿದ್ದರೆಂದು ತಿಳಿದು ಬರುತ್ತದೆ. ಇದನ್ನು ಪೂರ್ವದಲ್ಲಿ ಸೇವಕರು ಪರಿಚಾರಕರೆಂದು ಕರೆಯುವ ಇವರು ದೇಸಾಯಿಗಳ ಸೇವೆಯಲ್ಲಿ ನಿರತರಾಗಿರಬೇಕೆಂದು ತಿಳಿದು ಬರುತ್ತದೆ. ಇಂತಹ ಸಿಪಾಯಿಗಳಿಗೆ

ನೀಡಿದ ಗುರುತು ಮತ್ತು ಸಿಪಾಯಿ ಉಡುಪುಗಳ ಮೇಲಿಂದಾ ಅರಿಯಬಹುದು. ಹೀಗೆ ನೇಮಕಗೊಂಡ ಸಿಪಾಯಿಗಳು ದೇಸಾಯಿಗಳಲಿದ್ದರೆಂದು ಸ್ಪಷ್ಟವಾಗುತ್ತದೆ. ಇವರು ದೇಸಾಯಿಯವರಿಗೆ ಆಪ್ತರಾಗಿದ್ದು, ಅವರ ಬೇಕು ಬೇಡಿಕೆಗಳನ್ನು ಬಲ್ಲವರಾಗಿದ್ದರು.

## ೨ ಸಾಮಾಜಿಕ ಜೀವನ

ಹನಗಂಡಿ ದೇಸಾಯಿಗಳ ಸಾಮಾಜಿಕ ಜೀವನ ಶೈಲಿಯೂ ಕೂಡಾ ಸರಳ ಸಂಪ್ರದಾಯ ಶೀಲವಾಗಿತ್ತೆಂದು ತಿಳಿದು ಬರುತ್ತದೆ. ಇವರು ಎಂದಿಗೂ ಶ್ರೀಮಂತಿಕೆ ರಾಜಮನೆತನದ ಅಹಂನಲ್ಲಿ ಬೆಳೆದವರಾಗಿರಲಿಲ್ಲ. ಸರಳವಾಗಿ ಜನಸಾಮಾನ್ಯರೊಂದಿಗೆ ಬೆರೆಯುವುದು ಇವರ ವಿಶಿಷ್ಟ ಜೀವನ ಶೈಲಿಯಾಗಿದೆ. ಸಾಮಾಜಿಕ ಜೀವನದಲ್ಲಿ ಎಂದು ಮೇಲು-ಕೀಳು ಎಂದು ಭಾವಿಸಿ ವಿವಿಧ ಕೋಮುಗಳ ಮಧ್ಯ ಕಂದಕವನ್ನುಂಟು ಮಾಡದೇ ಸಾಮಾಜಿಕ ಸ್ವಾಸ್ಥ್ಯ ಕಾಪಾಡುವಲ್ಲಿ ಶ್ರಮಿಸಿದವರಾಗಿದ್ದಾರೆ.

ಭಾರತೀಯ ಸಾಮಾಜಿಕ ಜೀವನವು ಪ್ರಾಚೀನ ಕಾಲದಿಂದಲೂ ಪುರುಷ ಪ್ರಧಾನ ಸಮಾಜವೇ ಆಗಿದೆ. ಅದನ್ನು ಇವರ ಮನೆತನದಲ್ಲಿಯೂ ನೋಡಬಹುದು, ಪಿತೃ ಪ್ರಧಾನವಾದ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದು ಮಹಿಳೆಯರು ಕೂಡಾ ಸಾಮಾಜಿಕ, ಕೌಟುಂಬಿಕ ಜೀವನದಲ್ಲಿ ಪ್ರಧಾನವಾದ ಪಾತ್ರವಹಿಸಿದವರಾಗಿದ್ದಾರೆ. ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದರಿಂದ ಉತ್ತರಾಧಿಕಾರತ್ವದ ಹಕ್ಕು ಕೂಡಾ ಹಿರಿಯ ಮಗನಿಗೆ ದೊರೆಯುತ್ತಿತ್ತು. ಹೆಣ್ಣು ಮಕ್ಕಳನ್ನು ಶ್ರೀಮಂತ ಮನೆತನದವಗಳಿಗೆ ವಿವಾಹ ಮಾಡಿಕೊಡುವ ಪದ್ಧತಿ ಇತ್ತು. ಆದರೆ ಈ ಒಂದು ದೇಸಾಯಿಯವರ ಮನೆಯಲ್ಲಿ ಸುಮಾರು ೮ ತಲೆಯವರಿಗೆ ಪುತ್ರ ಸಂತಾನವಿರಲಿಲ್ಲ. ೮ನೇಯ ತಲೆಗೆ ಪುತ್ರ ಸಂತಾನ ಪ್ರಾರಂಭವಾಯಿತು ಅವರೇ ಪಾಯಪ್ಪಾ ದೇಸಾಯಿಯವರ ಪತ್ನಿ ಕುಸುಮಾವತಿ.

ಜನಸಾಮಾನ್ಯರೊಂದಿಗೆ ನಿಕಟ ಸಂಬಂಧ ಹೊಂದಿದ್ದ ಇವರು ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಿದ್ದರಿಂದ ಸಹಜವಾಗಿಯೇ ಜನರು ಇವರ ಬೆಂಬಲಕ್ಕೆ ನಿಂತರು, ಹಣದ ಕೊರತೆಯಿಂದಾಗಿ ಬಡ ಕೃಷಿಕರ ಮಕ್ಕಳ ವಿವಾಹಗಳು ನಿಲ್ಲುವ ಸಂದರ್ಭದಲ್ಲಿ ಈ ದೇಸಾಯಿಯರು ಉದಾರವಾಗಿ ಹಣಕಾಸು ನೆರವು ನೀಡಿ ತಾವೇ ನಿಂತು ವಿವಾಹ ಮಾಡಿಸಿಕೊಟ್ಟ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಕೊಡಗೈ ದಾನಿಗಳಾಗಿದ್ದ ಇವರು ಎಂದು ಸ್ವಾರ್ಥಪರ ಯೋಚನೆಯಲ್ಲಿ ತೊಡಗಿರಲಿಲ್ಲ, ಇದು ಅವರಲ್ಲಿದ್ದ ಉದಾರ ಗುಣ ಮತ್ತು ಜನರ ಮೇಲಿದ್ದ ಪ್ರೀತಿಯನ್ನು ಬಿಂಬಿಸುತ್ತದೆ. ದೇಸಾಯಿಯವರಲ್ಲಿ ಜಕ್ಕಪ್ಪ.(ಕೃಷ್ಣಗೌಡ), ಅಲ್ಲಪ್ಪಾ, ಮಗೆಪ್ಪ, ದೇಸಾಯಿಗಳು ಕೂಡಾ ಹಲವು ಬಡವರ ಕುಟುಂಬಗಳ ರಕ್ಷಣೆಗೆ ಉದಾರ ದಾನಮಾಡಿದನ್ನು ಅರಿಯಬಹುದಾಗಿದೆ.

ಹನಗಂಡಿ ದೇಸಾಯಿಗಳಲ್ಲಿ ಅನೇಕರು ಮಕ್ಕಳ ಮೇಲೆ ಅಪಾರ ಪ್ರೀತಿಯನ್ನು ಹೊಂದಿದ್ದರಲ್ಲದೆ ಸಮಾಜದಲ್ಲಿ ಶಿಸ್ತನ್ನು ಅಳವಡಿಸಿಕೊಳ್ಳುವ ಬಗೆಯನ್ನು ಭೋದಿಸುತ್ತಿದ್ದರು, ಪ್ರತಿ ಸಾಯಂಕಾಲ

ಕುಟುಂಬದ ಸದಸ್ಯರೊಂದಿಗೆ ಉಭಯ ಕುಶಲೋಪಹರಿಯಲ್ಲಿ ತೊಡಗುತ್ತಿದ್ದರು. ಮಕ್ಕಳ ಶಿಕ್ಷಣ ಅವರ ಕಾರ್ಯ ಚಟುವಟಿಕೆಗಳು ಅವರ ಅಭಿರುಚಿಗಳು ಹೀಗೆ ಅನೇಕ ಅಂಶಗಳ ಕುರಿತು ತಿಳಿದುಕೊಳ್ಳುತ್ತಿದ್ದರು. ಅವರ ದೈಹಿಕ, ಮಾನಸಿಕ, ಶೈಕ್ಷಣಿಕ, ಗುಣಮಟ್ಟ ಸುಧಾರಣೆಯಲ್ಲಿಯೂ ಇವರು ಗಮನ ಹರಿಸುತ್ತಿದ್ದರು. ಏಕಪತ್ನಿ ಪದ್ಧತಿಯು ಜನಸಾಮಾನ್ಯರಲ್ಲಿ ಅಸ್ತಿತ್ವದಲ್ಲಿತ್ತು. ಎಲ್ಲ ಅರಸು ಮನೆತನಗಳಲ್ಲಿ ಒಂದಕ್ಕಿಂತ ಹೆಚ್ಚು ಪತ್ನಿಯರನ್ನು ಹೊಂದಿರುವುದನ್ನು ನಾವು ಕಾಣುತ್ತೇವೆ. ಆದರೆ ಹನಗಂಡಿ ದೇಸಾಯಿ ಮನೆತನದಲ್ಲಿ ಏಕಪತ್ನಿ ಪದ್ಧತಿಯನ್ನು ಅನುಸರಿಸಿದ್ದಾರೆ. ಇವರು ರಾಜ ಮಹಾರಾಜರಂತೆಯೇ ಜೀವನ ನಡೆಸುತ್ತಿದ್ದನ್ನು ತಿಳಿಯಬಹುದು.

## ಜಾತಿ ವ್ಯವಸ್ಥೆ

ಪ್ರಾಚೀನ ವರ್ಣಾಶ್ರಮ ಧರ್ಮವು, ಈ ಅವಧಿಗೂ ಮುಂದುವರೆದಿತ್ತೆಂದು ಹೇಳಬಹುದು ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರೂ ಸಾಮಾಜಿಕ ವ್ಯವಸ್ಥೆಯ ಸ್ತರಗಳಲ್ಲಿ ಜೀವನ ಸಾಗಿಸುತ್ತಿದ್ದರು. ಬ್ರಾಹ್ಮಣ ವರ್ಗವು ಪುರೋಹಿತರಾಗಿದ್ದು ಪೂಜೆ, ಯಜ್ಞ, ಯಾಗ, ಹೋಮ–ಹವನಗಳನ್ನು ಮಾಡಿಕೊಂಡಿದ್ದರೆಂದು ತಿಳಿದು ಬರುತ್ತದೆ. ಹನಗಂಡಿ ದೇಸಾಯಿಗಳು ಜೈನರಾಗಿದ್ದು ಕ್ಷತ್ರಿಯ ವರ್ಗಕ್ಕೆ ಸೇರಿದವರು. ರೈತರು, ವ್ಯಾಪಾರಿಗಳು, ಕೃಷಿ, ಕೂಲಿಕಾರರೆಲ್ಲ ವೈಶ್ಯರಾಗಿದ್ದರು. ಶೂದ್ರರು ಈ ಜಾತಿ ವ್ಯವಸ್ಥೆಯ ಕೆಳಸ್ತರದಲ್ಲಿದ್ದು. ಗ್ರಾಮದ ಸ್ವಚ್ಚತೆ ಇವರ ಪ್ರಮುಖ ಕಾರ್ಯವಾಗಿತ್ತು. ಊರಲ್ಲಿ ಯಾರಾದರೂ ತೀರಿಕೊಂಡರೆ ಆ ಸುದ್ದಿಯನ್ನು ಮುಟ್ಟಿಸುವುದು, ಸತ್ತ ದನಗಳನ್ನು ಊರ ಹೊರಗೆ ಸಾಗಿಸುವದು ಉಳಿದ ಮೂರು ಜಾತಿಯ ಸೇವೆ ಮಾಡಿಕೊಂಡಿರುವದು ಮತ್ತು ರೈತರಿಗೆ ಕಂದಾಯ ವಸೂಲಿಯಂತಹ ಮೊದಲಾದ ಕಾರ್ಯಗಳಲ್ಲಿ ಸಹಕರಿಸುತ್ತಿದ್ದರು. ವೀರಶೈವ ಧರ್ಮದವರು ಬಹುಸಂಖ್ಯೆಯಲ್ಲಿದ್ದು, ಅವರು ಉನ್ನತ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಇವರೆಲ್ಲ ವತನ ಭೂಮಿಯನ್ನು ಪಡೆದು ಅದರಲ್ಲಿಯೇ ತಮ್ಮ ಜೀವನ ಸಾಗಿಸುತ್ತಿದ್ದರು. ಈ ಅವಧಿಯಲ್ಲಿ ಜಂಗಮರೂ ಪೂಜೆ ಪುರಸ್ಕಾರಗಳನ್ನು ಮಾಡುತ್ತಿದ್ದು ಅವರು ಪುರೋಹಿತಶಾಹಿ ವರ್ಗಕ್ಕೆ ಸೇರಿದ್ದರು.

ಈ ಜಾತಿ ವ್ಯವಸ್ಥೆಯಲ್ಲಿಯೇ ಸಮಾಜದಲ್ಲಿ ಅಧಿಕಾರಿ ಆಡಳಿತ ವರ್ಗವೆಂದು ವಿಂಗಡಿಸಬಹುದಾಗಿದೆ. ಈ ಅಧಿಕಾರಿಗಳು ಜಾತಿಯನ್ನಾಧರಿಸಿ ವಿಂಗಡಿಸಲ್ಪಟ್ಟಿದ್ದವೆಂದು ತಿಳಿದುಬರುತ್ತದೆ. ಬ್ರಾಹ್ಮಣರು, ಕುಲಕರ್ಣಿ, ಶಾನುಭೋಗ ಚಿಕ್ಕ–ಪುಟ್ಟ ವತನದಾರಿ ಹುದ್ದೆಗಳನ್ನು ಪಡೆದುಕೊಂಡಿದ್ದರು.

ವೃತ್ತಿಯನ್ನಾಧರಿಸಿಯೂ ಕೂಡಾ ಈ ಸಾಮಾಜಿಕ ವ್ಯವಸ್ಥೆಯನ್ನು ಕಂಡುಕೊಳ್ಳಬಹುದು. ಅವರು ತಮ್ಮದೆ ಆದ ಕಸುಬಿನಲ್ಲಿ ಜೀವನ ಸಾಗಿಸುತ್ತಿದ್ದರು. ಬಡಿಗ, ಕುಂಬಾರ, ಕಮ್ಮಾರ, ಗಾಣಿಗ, ಚರ್ಮಕಾರ, ಮಡಿವಾಳ ಹೀಗೆ ಅನೇಕ ವೃತ್ತಿಗಳನ್ನು ಆಧರಿಸಿ ಸಾಮಾಜಿಕ ಜೀವನ ವ್ಯವಸ್ಥಿತಗೊಂಡಿತು. ಇವರು ಕೂಡಾ "ಜೂಡಿ" ಎಂಬ ಭೂಮಿಯನ್ನು ಪಡೆದುಕೊಂಡಿದ್ದರು.

ಹನಗಂಡಿ ದೇಸಾಯಿಗಳು ಕ್ಷತ್ರಿಯರಾಗಿದ್ದರು, ಅಂದರೆ ಇವರು ದಿಗಂಬರ ಪಂಗಡದ ಜೈನರಾಗಿದ್ದು ಇವರು ಪೂರ್ಣ ಪ್ರಮಾಣದ ಸಸ್ಯಹಾರಿಗಳಾಗಿದ್ದರೆಂದು ಹೇಳಬಹುದು. ತರಕಾರಿ ಪದಾರ್ಥಗಳು, ಹಣ್ಣು ಹಂಪಲಗಳು, ಹೈನು ಪದಾರ್ಥಗಳು, ಅನ್ನ, ರೊಟ್ಟಿ, ಚಪಾತಿ ಮೊದಲಾದವುಗಳು ಇವರು ಸೇವಿಸುವ ಪ್ರಮುಖ ಆಹಾರ ಪದಾರ್ಥಗಳಾಗಿದ್ದವು.(೨) ಜನಸಾಮಾನ್ಯ ಆಹಾರವು ಇದೇ ಆಗಿತ್ತೆಂದು ಹೇಳಬಹುದು, ಮುಸ್ಲಿಂನೇಕರು ಮಾಂಸಾಹಾರಿಗಳಾಗಿದ್ದರೂ ಹಿಂದೂಗಳ ಕೆಲುವು ಪಂಗಡಗಳೂ ಮಾಂಸವನ್ನು ಸೇವಿಸುತ್ತಿದ್ದರು. ಆದರೆ ವೀರಶೈವರು ಕಟ್ಟಾ ಶಾಖಾಹಾರಿಗಳಾಗಿದ್ದರೆಂದು ತಿಳಿದು ಬರುತ್ತದೆ. ಜಾತ್ರೆ ಉತ್ಸವಗಳಲ್ಲಿ ದನಕರಗಳನ್ನು ಬಲಿಕೊಡುವ ಸಂಪ್ರದಾಯವಿದ್ದಿತು. ಈ ರೀತಿ ಬಲಿಕೊಟ್ಟ ಪ್ರಾಣಿಗಳನ್ನು ಕೂಡಾ ಪ್ರಸಾದವೆಂದು ಸ್ವೀಕರಿಸುವ ಪದ್ದತಿ ಇತ್ತು. ಇದನ್ನು ಮಾಂಸಾಹಾರಿಗಳು ಮಾತ್ರ ಸೇವಿಸುತ್ತಿದ್ದರು, ಪುರೋಹಿತಶಾಹಿ ಹಾಗೂ ಇತರರು ಇದನ್ನು ಸೇವಿಸುತ್ತಿರಲಿಲ್ಲ. ಒಟ್ಟಾರೆಯಾಗಿ ಈ ಅವಧಿಯಲ್ಲಿ ಸಸ್ಯಹಾರವೇ ಬಹುಜನರ ಆಹಾರ ಪದಾರ್ಥವೆಂದು ತಿಳಿದು ಬರುತ್ತದೆ. ಹನಗಂಡಿ ದೇಸಾಯಿ ಮನೆತನದ ಮತ್ತು ಅಂದಿನ ಸಮಕಾಲೀನ ಸ್ತ್ರೀಯರ ಬಗ್ಗೆ ವಿವೇಚಿಸಲಾಗಿ ಅವರೆಲ್ಲಾ ಸುಶಿಕ್ಷಿತರಾಗಿದ್ದರೆಂದು ತಿಳಿದು ಬರುತ್ತದೆ. ದೇಸಾಯಿಗಳು ವಿವಾಹವಾದ ಪತ್ನಿಯರೆಲ್ಲ ಸಹಜವಾಗಿಯೇ ಧೈರ್ಯ, ಎದಿಕಾರಿಕೆ ಮತ್ತು ಅಷ್ಟೆ ಸಮಚಿತ್ತದಿಂದ ಆಡಳಿತದ ಎಲ್ಲಾ ಜ್ಞಾನವನ್ನು ಪಡೆದುಕೊಂಡಿದ್ದರು. ದೇಸಾಯಿಗಳು ಪ್ರವಾಸಕ್ಕೆಂದು ತೆರಳಿದಾಗ ಸುಮಾರು ತಿಂಗಳುಗಳು ಕಾಲ ದೇಸಗತಿಯ ಆಡಳಿತವನ್ನು ಪತ್ನಿಯರು ನಡೆಸಿಕೊಂಡು ಬಂದಿದ್ದರು. ಆಟ, ಮನರಂಜನೆಗಳೂ ಕೂಡಾ ದೇಸಾಯಿಗಳಿಂದ ಪ್ರೋತ್ಸಾಹ ಪಡೆದಿದ್ದವು. ಕುಸ್ತಿ ಎತ್ತುಗಳ ಮತ್ತು ಎತ್ತಿನ ಬಂಡೆಗಳ ಸ್ಪರ್ಧೆಗಳಿರುತ್ತಿದ್ದವು ಇಂದಿನ ಕ್ರಿಕೆಟಗೆ ಯಾವ ರಾಜಾಶ್ರಯ ದೊರೆತಿದೆಯೋ ಹಾಗೆಯೇ ಅಂದು ಕುಸ್ತಿಗೆ ಒಳ್ಳೆಯ ಪ್ರೋಹ್ಸಾಹವಿದ್ದು, ಜನಪ್ರಿಯವಾದ ಕ್ರೀಡೆಯಾಗಿದ್ದಿತು. ಜಾತ್ರೆಗಳಲ್ಲಿ ಕುಸ್ತಿಯ ಪಂದ್ಯಾವಳಿಯನ್ನು ಏರ್ಪಡಿಸುತ್ತಿದ್ದರು, ಪ್ರತಿ ವರ್ಷ ಶ್ರಾವಣ ಕಡೆಯ ಸೋಮವಾರ ತೇರದಾಳದಲ್ಲಿ

ಅಲ್ಲಮಪ್ರಭು ದೇವರ ಜಾತ್ರೆ ಜರುಗುತ್ತಿತ್ತು. ಆ ಸಂದರ್ಬದಲ್ಲಿ ಕುಸ್ತಿಯನ್ನು ಏರ್ಪಡಿಸುತ್ತಿದ್ದರು, ಇದು ಇವತ್ತಿಗೂ ಕೂಡಾ ಮುಂದುವರೆದಿದೆ, ಸುತ್ತಲಿನ ದೂರದ ಊರುಗಳಿಂದ ಪೈಲವಾನರು ಕುಸ್ತಿ ಪಂದ್ಯದಲ್ಲಿ ಭಾಗವಹಿಸುತ್ತಿದ್ದರು. ಅಂದು ತಮ್ಮ ದೇಸಗತಿಯ ವ್ಯಾಪ್ತಿಯಲ್ಲಿ ತೇರದಾಳ, ಮುಗಳಖೋಡ, ಹಾರೂಗೇರಿ, ಹಳಂಗಳಿ, ಯಲ್ಪಾರಟ್ಟಿ ಗ್ರಾಮಗಳಲ್ಲಿ ಈ ಕುಸ್ತಿ ಪಂದ್ಯಗಳು ಜರುಗುತ್ತಿದ್ದವು. ಇವತ್ತಿಗೂ ಈ ಊರಿಗಳಲ್ಲಿ ಪೈಲವಾನರು ಅಧಿಕ ಸಂಖ್ಯೆಯಲ್ಲಿದ್ದಾರೆ. ಜನರು ಕೂಡಾ ಈ ಬಯಲು ಕುಸ್ತಿ ಪಂದ್ಯಗಳನ್ನು ನೋಡಲು ಬಹುಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಕೃಷಿ ಕಾರ್ಯಗಳು ಮುಗಿದ ಮೇಲೆ ರೈತರು ವಿಶ್ರಾಂತಿಯಿಂದಿರುವ ಸಂದರ್ಭಗಳಲ್ಲಿಯೇ ಹಬ್ಬ ಜಾತ್ರೆಗಳು ನಡೆಯುತ್ತಿದ್ದ, ಆ ಸಂದರ್ಬಗಳಲ್ಲಿಯೇ ಈ ಪಂದ್ಯಗಳು ನಡೆಯುತ್ತಿದ್ದವು, ಮಹಾರಾಷ್ಟ್ರದ ಕೊಲ್ಲಾಪುರ, ಸೊಲ್ಲಾಪೂರ, ಸಾಂಗಲಿ, ಮಿರಜ ಮೊದಲಾದ ನಗರಗಳಿಂದ ಕುಸ್ತಿ ಪಟುಗಳು ಈ ಪಂದ್ಯದಲ್ಲಿ ಭಾಗವಹಿಸುತ್ತಿದ್ದರು ಕುಸ್ತಿ ಪಂದ್ಯಗಳನ್ನು ನೋಡಲು ದೇಸಾಯಿಗಳು ಆಮಂತ್ರಿತರಾಗುತ್ತಿದ್ದರು, ಗೆದ್ದ ಪೈಲ್ವಾನರಿಗೆ ಬೆಳ್ಳಿ ಕಡಗ, ಬೆಳ್ಳಿಯ ಗದೆಗಳನ್ನು ಬಹುಮಾನವಾಗಿ ನೀಡಲಾಗುತ್ತಿತ್ತಲ್ಲದೇ ಸೋತವರಿಗೂ ಸಮಾಧಾನಕರ ಬಹುಮಾನಗಳನ್ನು ನೀಡಿ ಅವರಿಗೆ ಪ್ರೋತ್ಸಾಹ ನೀಡುತ್ತಿದ್ದರು.

ಕುಸ್ತಿ ಪಂದ್ಯಗಳ ಜೊತೆಗೆ ಎತ್ತು ಬಂಡೆಗಳ ಸ್ಪರ್ಧೆಯು ನಡೆಯುತ್ತಿದ್ದು ಸ್ಪರ್ಧೆಯಲ್ಲಿ ಗೆದ್ದ ಎತ್ತುಗಳಿಗೆ ವಿಶೇಷ ಬಹುಮಾನ ನೀಡಲಾಗುತಿತ್ತು. ಕಾರ ಹುಣ್ಣಿಮೆಯಂದು ಎತ್ತುಗಳ ಓಟವನ್ನು ಏರ್ಪಡಿಸಲಾಗುತಿತ್ತು. ಅದಕ್ಕೆಂದು ಸಾವಿರಾರು ರೂಪಾಯಿಗಳ ಹಣಕೊಟ್ಟು ಬಲಿಷ್ಠ ಎತ್ತುಗಳನ್ನು ತರುತ್ತಿದ್ದರು. ಈ ಸ್ಪರ್ಧೆ ಆರಂಭವಾದ ಮೇಲೆ ದೇಸಾಯಿಯರ ಎತ್ತುಗಳನ್ನು ಬಿಡುತ್ತಿದ್ದರು, ಸುತ್ತಲಿನ ಗ್ರಾಮಗಳ ಎತ್ತುಗಳೂ ಈ ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದು ಈ ಸ್ಪರ್ಧೆಯ ಮೊದಲಿಗೆ ದೇಸಾಯಿಗಳ ಎತ್ತುಗಳು ಶೃಂಗರಿಸಿಕೊಂಡು ಬಂದು ಜನಸ್ತೋಮದ ಮದ್ಯ ಓಡಿಸುತ್ತಿದ್ದರು. ಆ ಎತ್ತುಗಳನ್ನು ಹಿಡಿದವರಿಗೆ ಯೋಗ್ಯ ಬಹುಮಾನಗಳನ್ನು ಘೋಷಿಸಲಾಗುತಿತ್ತು. ಸ್ಪರ್ಧೆಗೆಂದೇ ಇಂತಹ ಬಲಿಷ್ಠ ಎತ್ತುಗಳನ್ನು ತಂದು ಸಾಕುತ್ತಿದ್ದರು, ಅಂದಿನ ಮನರಂಜನೆಯ ಮುಖ್ಯ ಸಾಧನವೆಂದರೆ ನಾಟಕ,ದೊಡ್ಡಾಟ, ಸಣ್ಣಾಟಗಳನ್ನು ಜನರು ಆಡುತ್ತಿದ್ದರು.

ಹನಗಂಡಿ ದೇಸಗತಿಯು ಸಾಂಗಲಿ ಸಂಸ್ಥಾನಕ್ಕೆ ಸೇರಿದ್ದರಿಂದ ಸಹಜವಾಗಿಯೇ ಮರಾಠಿ ಬಾಷೆಯ ಪ್ರಾಧಾನ್ಯತೆಯನ್ನು ಕಾಣಬಹುದು ಹಾಗೂ ಎಲ್ಲ ಲೆಕ್ಕ ಪತ್ರಗಳೂ ಕೂಡಾ ಮರಾಠಿಯಲ್ಲಿಯೇ

ದೊರೆತರೂ ಕೂಡಾ ಕನ್ನಡ ಬಾಷೆಯನ್ನು ನಿರ್ಲಕ್ಷಿಸರಿರಲಿಲ್ಲ. ಕನ್ನಡ ಬಾಷೆ ಸಾಹಿತ್ಯದಲ್ಲಿ ಇವರಿಗೆ ಅಪಾರ ಗೌರವವಿತ್ತು. ಇವರ ಕಾಲದ ಕನ್ನಡ ಬಾಷೆಯಲ್ಲಿ ಮರಾಠಿ ಪ್ರಭಾವನ್ನು ಕಾಣಬಹುದು ಜನ ಸಾಮಾನ್ಯರ ಬಾಷೆ ಕನ್ನಡವಾಗಿದ್ದರೂ ಮರಾಠಿಯನ್ನು ಮಾತನಾಡಲು ಹಾಗೂ ತಿಳಿದುಕೊಳ್ಳವವರಾಗಿದ್ದರೂ. ಇವರ ಅನೇಕ ಕಾಗದ ಪತ್ರಗಳು ಕನ್ನಡ ಮತ್ತು ಮರಾಠಿ ಬಾಷೆಯಲ್ಲಿವೆ. ಹೊಲ ಮನೆಗಳ ಬಾಡಿಗೆ ಪತ್ರ, ಸಾಲ ಪತ್ರಗಳು ಕನ್ನಡದಲ್ಲಿಯೂ ಇನ್ನೂ ಕೆಲವು ಮರಾಠಿಯಲ್ಲಿಯೂ ಇವೆ. ಬ್ರಿಟಿಷರ ಅಧಿಕಾರದಲ್ಲಿ ಮಾತ್ರ ಹೊಲ ಮನೆಗಳ ದಾಖಲೆ ಪತ್ರಗಳು ಇಂಗ್ಲೀಷದಲ್ಲಿ ಕಾಣಬಹುದು ಹೀಗೆ ಕನ್ನಡ, ಮರಾಠಿ ಭಾಷೆಗಳು ಜನಸಾಮಾನ್ಯರ ಆಡು ಭಾಷೆಗಳಾಗಿದ್ದವು.

ಸಾಕು ಪ್ರಾಣಿಗಳಲ್ಲಿ ಮುಖ್ಯವಾಗಿ ಎತ್ತುಗಳು, ಆಕಳು, ಎಮ್ಮೆ, ಕುರಿ, ಆಡು, ನಾಯಿ, ಕುದುರೆ ಮುಂತಾದ ಪ್ರಾಣಿಗಳನ್ನು ಸಾಕುತ್ತಿದ್ದರು ಹಾಗೂ ಉಪಯೋಗಿಸಿಕೊಳ್ಳುತ್ತಿದ್ದರು.

ಈಗಿನಂತೆ ಯಂತ್ರಗಳು ಕೃಷಿ ಕಾರ್ಯದಲ್ಲಿ ಬಳಕೆಯಾಗುತ್ತಿರಲಿಲ್ಲವಾದರಿಂದ ಎತ್ತುಗಳನ್ನು ಬಂಡಿಗಾಗಿ ಮತ್ತು ಕೃಷಿ ಕಾರ್ಯಕ್ಕಾಗಿ ಉಪಯೋಗಿಸಲ್ಪಡುತ್ತಿದ್ದವು ಕುರಿ–ಆಡುಗಳು ಕೂಡಾ ಹೈನುಕಾರಿಕೆಯ ಪ್ರಾಣಿಯಾಗಿದ್ದರೂ ಅವುಗಳನ್ನು ಮಾಂಸಕ್ಕಾಗಿ ಉಪಯೋಗಿಸುತ್ತಿದ್ದರು. ದೇಸಾಯಿಗಳು ಗ್ರಾಮಗಳಿಗೆ ಭೇಟ್ಟಿನೀಡುತ್ತಿದ್ದ ಸಂದರ್ಭದಲ್ಲಿ ಕುದುರೆಯನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಇವರ ಕುದುರೆಯ ಉಸ್ತುವಾರಿ ನೋಡಿಕೊಳ್ಳಲೆಂದೆ ಸೇವಕರನ್ನು ನೇಮಿಸಿಕೊಂಡಿದ್ದು ಇದೆ. ಇವರಿಗೆ "ಜೂಡಿ" ಎಂಬ ಭೂಮಿಯನ್ನು ಉಂಬಳಿಯಾಗಿ ಕೊಡಲಾಗುತಿತ್ತು.

ಉಡುಗೆ ತೊಡುಗೆ ಆಭರಣಗಳಲ್ಲಿಯೂ ಅಂತಹ ಹೇಳಿಕೊಳ್ಳವ ವ್ಯತ್ಯಾಸ ಕಾಣಲಾರವು ಜನಸಾಮಾನ್ಯರು ಸಾಧಾರಣ ಉಡುಪುಗಳನ್ನು ಧರಿಸುತ್ತಿದ್ದರು, ಧೊತಿ, ಜುಬ್ಬಾ ಮತ್ತು ತಲೆಯ ಮೇಲೆ ಪೇಟಾ (ರುಮಾಲ) ಅಥವಾ ಟೋಪಿಗಳನ್ನು ಧರಿಸುತ್ತಿದ್ದರು ಸಾಮಾನ್ಯ ಸ್ತ್ರೀಯರು ಸಾಧಾರಣ ಮಟ್ಟದ ಸೀರೆ, ಕುಪ್ಪಸಗಳನ್ನು ಧರಿಸುತ್ತಿದ್ದರು. ಹಬ್ಬ ಜಾತ್ರೆ ಉತ್ಸವಗಳಲ್ಲಿ ಹೋಸ ಬಟ್ಟೆಗಳನ್ನು ಧರಿಸಿ ಹಬ್ಬಗಳನ್ನು ಆಚರಿಸುತ್ತಿದ್ದರು. ದೇಸಾಯಿಗಳು ಬೆಲೆಬಾಳುವ ಬಟ್ಟೆಗಳನ್ನು ಧರಿಸುತ್ತಿದ್ದರು. ರೇಷ್ಮೆ ಬಟ್ಟೆಗಳು, ರೇಷ್ಮೆ ಪೇಟಾ, ವಸ್ತ್ರಗಳನ್ನು ಧರಿಸುತ್ತಿದ್ದರಲ್ಲದೆ ಗಾದಿ ಮಾಲಿಕರು ಸಾಂಪ್ರದಾಯಕವಾಗಿ ಬಂದ ಕೆಂಪು ರೇಷ್ಮೆಯ ಪೇಟದಂತೆ ಕಾಣುವ ಟೊಪಿಗೆ ಮೈತುಂಬಾ ರಾಜ ಮೋಷಾಕುಗಳನ್ನು ಧರಿಸುತ್ತಿದ್ದರು.

ಆಭರಣಗಳ ಕುರಿತಂತೆ ಹೇಳಬೇಕೆಂದರೆ ಇವರು ರಾಜರು ಧರಿಸುತ್ತಿದ್ದಂತೆ ಮೈತುಂಬಾ ಚಿನ್ನದ ಆಭರಣಗಳನ್ನು ಧರಿಸುತ್ತಿದ್ದರು ಸಾಂಪ್ರಾದಾಯಕವಾಗಿ ಕೈಯಲ್ಲಿ ಉಂಗುರು, ಚಿನ್ನದ ಚೈನು, ನಡುಪಟ್ಟಿ, ಕಾಲಲ್ಲಿ ಚಿನ್ನದ ಕಡಗ, ಕೈಯಲ್ಲಿ ಚಿನ್ನದ ಕಡಗ ಮೊದಲಾದ ಆಭರಣಗಳನ್ನು ದೇಸಾಯಿಗಳು ಧರಿಸುತ್ತಿದ್ದರು. ಸ್ತ್ರೀಯರು ಕೂಡಾ ಆಭರಣ ಪ್ರೀಯರಾಗಿದ್ದು ಇವರು ಕುಸುರಿ ಕೆಲಸದಿಂದ ಮಾಡಿದ ರಿಂಗು, ನೆಕ್ಲೆಸ್, ಚಿನ್ನದ ಸರಗಳು, ಉಂಗುರ, ತಲೆಯಲ್ಲಿ ಚಿನ್ನದ ಆಭರಣದ ಹೂವುಗಳು ಕಿವಿಯೋಲೆ ಮತ್ತು ಪಟ್ಟದರಾಣಿ ಕಾಲಲ್ಲಿ ಬಂಗಾರದ ಕಡಗಗಳನ್ನು ಧರಿಸುತ್ತಿದ್ದಳೆಂದು ತಿಳಿದು ಬರುತ್ತದೆ. ಸೊಂಟಪಟ್ಟ, ಕಾಲ್ಗೆಜ್ಜೆ, ತೋಳ್ಬಂದಿಗಳನ್ನು ದೇಸಾಯಿ ಮನೆತನದ ಸ್ತ್ರೀಯರು ಧರಿಸುತ್ತಿದ್ದರು ಅದರಂತೆಯೇ ಜನಸಾಮಾನ್ಯರು ಆಭರಣಗಳು ಸಾಧರಣವಾಗಿದ್ದು ಚಿನ್ನ ಬೆಳ್ಳಿಯಿಂದ ಮಾಡಿದ ಆಭರಣಗಳು ಅಂದರೆ ಸರ, ಮೂತ್ತಿನ ನತ್ತು, ಕಿವಿಯೋಲೆ, ಬಳೆ, ಗೆಜ್ಜೆ ಮೊದಲಾದವುಗಳು ಅವರ ಆಭರಣಗಳಾಗಿದ್ದವು.

## ೩) ಅರ್ಥಿಕ ಸ್ಥಿತಿ

### ಒಕ್ಕಲುತನ ಮತ್ತು ನೀರಾವರಿ ವ್ಯವಸ್ಥೆ

ಹನಗಂಡಿ ದೇಸಗತಿಯ ದೇಸಾಯಿಯವರ ಅರ್ಥಿಕ ಸ್ಥಿತಿಯು ಉತ್ತಮವಾಗಿತ್ತೆಂದು ತಿಳಿದು ಬರುತ್ತದೆ. ಕೃಷಿಯೇ ಆಧಾಯದ ಮೂಲವಾಗಿತ್ತು. ಈ ದೇಸಗತಿಯ ಒಡೆತನದಲ್ಲಿ ಸುಮಾರು ೧೨೦೦೦ ಎಕರೆ ಜಮೀನ ೩೩ ಗ್ರಾಮಗಳನ್ನೊಳಗೊಂಡಿತ್ತು ದೇಸಗತಿಯ ಉಗಮದ ಉದ್ದೇಶವು ಕಂದಾಯ ವಸೂಲಿಯೇ ಆಗಿದ್ದರಿಂದ ರಾಜ್ಯ ಬೊಕ್ಕಸಕ್ಕೆ ಇದರಿಂದ ಅಧಿಕ ಆಧಾಯವಿದ್ದಿತ್ತು. ಈ ಅವಧಿಯಲ್ಲಿ ಕೃಷಿಗೆ ಹೆಚ್ಚು ಭೂಮಿಯನ್ನು ಒಳಪಡಿಸಿದರು. ಬಂಜರು ಭೂಮಿ ಅರಣ್ಯ ಪ್ರದೇಶಗಳನ್ನು ಕೃಷಿಗೆ ಒಳಪಡಿಸಿ ಅದನ್ನು ಬಾರಾಬಲೂತಿದಾರರಿಗೆ "ಜೂಡಿ" ಎಂದು ಉಂಬಳಿ ಬಿಡುತ್ತಿದ್ದರಿಂದಲೇ ಅವರು ಅದನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದರು. ಈ ಕಾರಣದಿಂದಾಗಿಯೇ ಬಂಜರು ಪ್ರದೇಶವು ಕೃಷಿ ಜಮೀನಾಗಿ ಪರಿವರ್ತನೆಗೊಂಡಿತು. ಆರಂಭದಲ್ಲಿ ಮಳೆಯನ್ನಾಧರಿಸಿಯೇ ಕೃಷಿ ಸಾಗುವಳಿ ನಡೆಯುತ್ತಿದ್ದು. ವರ್ಷಕ್ಕೆ ಕೇವಲು ಒಂದು ಬೆಳೆಯನ್ನಷ್ಟೆ ಬೆಳೆಯಲಾಗುತ್ತಿತ್ತು. ಆದರೆ ಮುಂದೆ ನೀರಾವರಿ ವ್ಯವಸ್ಥೆ ಜಾರಿಗೊಳಿಸಲು ಪ್ರಾರಂಭಿಸಿದರು ಇವರು ತಮ್ಮ ಪ್ರದೇಶದಲ್ಲಿ ಅನೇಕ ಗ್ರಾಮಗಳಲ್ಲಿ ಕೆರೆಗಳನ್ನು ನಿರ್ಮಿಸಿ ಕಾಲುವೆಗಳ ಮೂಲಕ ತಮ್ಮ ಪ್ರದೇಶ ಹಚ್ಚ ಹಸಿರಾಗುವಂತೆ ಮಾಡುವಲ್ಲಿ ಇವರು ಬಹಳ ಶ್ರಮಿಸಿದ್ದಾರೆ. ತಮ್ಮ ಮೂಲ ನೆಲೆಯಾದ ಹನಗಂಡಿಯಲ್ಲಿಯೇ ಒಂದು ಕರೆಯನ್ನು ಕಟ್ಟಿಸಿದ್ದಾರೆ. ಮುಂದೆ ತೇರದಾಳದಲ್ಲಿಯೂ ಒಂದು ದೊಡ್ಡದಾದ ಕೆರೆಯನ್ನು ಅದಕ್ಕೆ ಹೊಂದಿಕೊಂಡು ಇನ್ನೊಂದು ಚಿಕ್ಕ ಕೆರೆಯನ್ನು ನಿರ್ಮಿಸಿದ್ದಾರೆ. ಹೀಗೆ ಹತ್ತು ಹಲವು ಕೆರೆಗಳನ್ನು ನಿರ್ಮಿಸಿದರು ಇವು ಕೆರೆಗಳೆಂದರೆ ಕೇವಲ ಚಿಕ್ಕ ಗಾತ್ರದವುಗಳಾಗಿರಲಿಲ್ಲ ಮಳೆಯ ನೀರನ್ನು ಸಂಗ್ರಹಿಸಿ ವರ್ಷವಿಡಿ ನೀರಾವರಿ ಕೈಗೊಳ್ಳವಷ್ಟು ನೀರು ಇವುಗಳಲ್ಲಿ ಶೇಖರಣೆಯಾಗುವಷ್ಟು ದೊಡ್ಡದಾಗಿದ್ದವು.(೧)

ಇದಕ್ಕೂ ಪೂರ್ವದಲ್ಲಿ ಕೆಲವು ಭಾಗದಲ್ಲಿ ಭೂಮಿ ಮಾತ್ರ ಏತ ನೀರಾವರಿಯನ್ನು ಅವಲಂಬಿಸಿತ್ತು ಬಾವಿ, ಕೆರೆ, ಕಾಲುವೆಗಳಿಂದ ಮಾತ್ರ ಸ್ವಲ್ಪ ಭಾಗವು ನಿರಾವರಿಗೊಳಪಟ್ಟು ವರ್ಷಕ್ಕೆ ಎರಡೂ ಬೇಳೆಗಳನ್ನಾದರೂ ಬೆಳೆಯಲಾಗುತಿತ್ತು ಒಂದೊಂದು ಸಲ ಬರಗಾಲ ತಲೆದೊರಿದಾಗ ಬರುವ ಬೆಳೆಗಳು ಕೈಕೊಡುತ್ತಿದ್ದವು. ಆಗ ರೈತರು ಕಂದಾಯ ಕೊಡಲು ಅಸಮರ್ಥರಾಗಿರುತ್ತಿದ್ದರು, ಅಂತಹ

ಸಂದರ್ಭದಲ್ಲಿ ದೇಸಾಯಿಗಿಗಳು ಕಂದಾಯ ವಸೂಲಿ ಮಾಡುತ್ತಿರಲಿಲ್ಲ, ಹೀಗೆ ರೈತರೇ ತಮ್ಮ ಉಸಿರು ಎಂದು ತಿಳಿದುಕೊಂಡಿದ್ದ ಹನಗಂಡಿ ದೇಸಾಯಿಗಳು ರೈತರು ಬಗ್ಗೆ ಕಾಳಜಿಯನ್ನು ಹೊಂದಿದ್ದರು.

ಈ ಅವಧಿಯಲ್ಲಿ ಒಣ ಬೇಸಾಯ ಮತ್ತು ನೀರಾವರಿ ಪದ್ಧತಿ ಇರುವದರಿಂದ ಹಲವು ಬೆಳೆಗಳನ್ನು ಅಂದರೆ, ಆಹಾರ ಧಾನ್ಯಗಳು ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಜೋಳ, ಬಿಳಿಜೋಳ, ಗೋಧಿ, ಶೇಂಗಾ, ಕುಸಬಿ, ಅಗಸಿ, ಹುರುಳಿ, ಗೋವಿನ ಜೋಳ, ಹತ್ತಿ ಮೊದಲಾದ ಹತ್ತು ಹಲವು ಬೆಳೆಗಳನ್ನು ಬೆಳೆಯಲಾಗುತ್ತಿತ್ತು.(೨)

ದೇಸಾಯಿಗಳ ಸೊದರರು ಪಡೆದಂತಹ (ಬಿರಾದಾರ) ಪೋಟಿಗೆ ಭೂಮಿಯನ್ನು ಅವರೇ ಅನುಭವಿಸುತ್ತಿದ್ದರು ಅದರಿಂದ ಗಾದಿಮಾಲಿಕರಿಗೆ ಯಾವುದೇ ರೀತಿಯಾದ ಕಂದಾಯವನ್ನು ಅಥವಾ ಬಾಡಿಗೆಯಾಗಲಿ ದೇಸಾಯಿಗಳಿಗೆ ನೀಡುತ್ತಿರಲಿಲ್ಲ, ಅಂದಿನ ನಿಯಮದ ಪ್ರಕಾರ ಗಾದಿಮಾಲಿಕನು ಪೋಟಿಗೆಯನ್ನು ತನ್ನ ತಮ್ಮಂದಿರು, ಮಲ ಸಹೋದರರು ಮತ್ತು ಅವರ ಮುಂದಿನ ಮೂರು ಪಿಳೀಗೆಗಳವರೆಗೂ ಕೊಡಬೇಕಿತ್ತು ಒಂದೊಂದು ವೇಳೆ ಪೋಟಿಗೆ ಭೂಮಿಯನ್ನು ಮೂರು ಪಿಳೀಗೆಗಳಗಿಂತ ಹೆಚ್ಚು ಕೊಟ್ಟಿದ್ದಾರೆ. ಪೋಟಿಗೆಯನ್ನು ಪಡೆದಂತವರು ಗಾದಿಮಾಲಿಕನ ಹೊರತು ಅದರಲ್ಲಿ ತಮ್ಮ ಅಧಿಕಾರವಿರುವುದಿಲ್ಲವೆಂದು ಭಾವಿಸುತ್ತಿದ್ದರು, ಒಂದು ವೇಳೆ ದೇಸಾಯಿಯರ ಸೋದರರು ಪೋಟಿಗೆ ಪಡೆಯಲು ನಿರಾಕರಿಸಿದರೂ ಕೂಡಾ ಅವರಿಗೆ ಹಿಸ್ಸೆಯೆಂದು ಸಿಗುತ್ತಿರಲಿಲ್ಲ. ಈ ರೀತಿ ಪೋಟಿಗೆ ಪಡೆದವರು ಸಾಮಾನ್ಯವಾಗಿ ಮಾಲಿಕನ ಜೊತೆಗೆ ಇರದೇ ತಾವೇ ಪ್ರತ್ಯೇಕವಾದ ಮನೆಮಾಡಿಕೊಂಡು ವಾಸಿಸುತ್ತಿದ್ದರು ಆದರೆ ಮದುವೆಯಾಗುವವರೆಗೂ ಮಾಲಿಕನ ಮನೆಯಲ್ಲಿಯೇ ಇರಬಹುದಿತ್ತು. ಕೆಲವು ವೇಳೆ ಗಾದಿ ಮಾಲಿಕರೇ (ದೇಸಾಯಿಗಳೆ) ಅವರ ವಿವಾಹವನ್ನು ನೆರವೇರಿಸಿ ಅವರಿಗೆ ಮದುವೆ ಮಾಡಿಕೊಡುತ್ತಿದ್ದರು. ಹೀಗೆ ಪೋಟಿಗೆ ಪಡೆದವರು ಭೂಮಿಗೆ ಮಾತ್ರ ಹಕ್ಕುದಾರರೇ ಹೋರತು ಅದರ ಮಾಲಿಕರಲ್ಲವೆಂದು ತಿಳಿಯಬೇಕಿತ್ತು.(೩) ಕ್ರಿ.ಶ.೧೯೫೦ರಲ್ಲಿ ಶ್ರೀ ಮೊರಾರ್ಜಿ ದೇಸಾಯಿಯವರು ಮುಂಬಯಿ ಮುಖ್ಯಮಂತ್ರಿಯಾಗಿದ್ದಾಗ ಪರಗಣ ಮತ್ತು ಕುಲಕರ್ಣಿ ಪದ್ದತಿ ರದ್ದತಿಯ ಶಾಸನವನ್ನು ಹೊರಡಿಸಿದ ಮೇಲಂತೂ ಜೇಷ್ಠ ಪುತ್ರಾಧಿಕಾರ ರದ್ದಾಗಿ ಆಸ್ತಿಯಲ್ಲಾ ಎಲ್ಲ ಮಕ್ಕಳಲ್ಲಿ ಹಂಚಿ ಹೋಗುತ್ತದೆ. ಇದರಿಂದ ಪೋಟಿಗೆ ಮತ್ತು ವತನ ಪದ್ದತಿ ನಾಶವಾಗುತ್ತದೆ.(೪)

## ಲೆಕ್ಕ ಪತ್ರ ವಿಭಾಗ

ಹನಗಂಡಿ ದೇಸಾಯಿಯವರ ಅರ್ಥವ್ಯವಸ್ಥೆಯಲ್ಲಿ ಒಂದು ವ್ಯವಸ್ಥಿತ ಲೆಕ್ಕ ಪತ್ರವಿಡುವ ಪದ್ಧತಿಯನ್ನು ಕಾಣಬಹುದು ಎಲ್ಲ ದೇಸಾಯಿಗಳು ಲೆಕ್ಕ ಪತ್ರವ್ಯವಸ್ಥೆಗೆ ಒತ್ತು ನೀಡಿದ್ದರು. ಏಕೆಂದರೆ, ಕೃಷಿ ಭೂಮಿಯನ್ನು ಲಾವಣಿ ಎಂದಾಗಲೀ ಅಥವಾ ಬಾಡಿಗೆ ಎಂದಾಗಲೀ ಪಡೆದ ರೈತರು ಕೆಲವು ಸಾರಿ ಮೋಸ ಮಾಡುತ್ತಿದ್ದರು. ಬಾಡಿಗೆ ಕೊಡದೆ ಇದ್ದರೂ ಕೂಡಾ ಕೊಟ್ಟವೆಂದು ಹೇಳುತ್ತಿದ್ದರು. ಇದರಿಂದ ಅರ್ಥ ವ್ಯವಸ್ಥೆಯೂ ದುಸ್ಥಿತಿಗೆ ತಲುಪುವ ಲಕ್ಷಣಗಳು ಮೂಡಿ ಬಂದವು. ಇದನ್ನು ಹೋಗಲಾಡಿಸಲು ಕಾರಕೂನನಿಗೆ ಸಲಹೆ ಮಾಡಿದರೂ ಕೂಡಾ ಅದು ಅಷ್ಟು ಪರಿಣಾಮಕಾರಿಯಾಗಲೇ ಇಲ್ಲ ಏಕೆಂದರೆ ಕೆಲವೊಂದು ದೇಸಾಯಿಗಳು ಕೂಡಾ ರೈತರ ಮೇಲೆ ಕಟ್ಟು ನಿಟ್ಟಿನ ಕ್ರಮಕೈಕೊಳ್ಳದಾದರೂ ಕಾರಣ ಅವರು ಮೃದು ಸ್ವಭಾವದವರಿದ್ದು ರೈತರು ಮೇಲೆ ಅಪಾರ ಪ್ರೀತಿ ವಿಸ್ವಾಸ ವಿರಿಸಿಕೊಂಡಿದ್ದರು, ಮುಂದೆ ಆನೇ ಗಾದಿ ಮಾಲಿಕ ಪಾಯಪ್ಪಾ ದೇಸಾಯಿಯವರು ಕಟ್ಟು ನಿಟ್ಟನ ಕ್ರಮವನ್ನು ಕೈಕೊಂಡು ಲೆಕ್ಕ ಪತ್ರಗಳನ್ನಿಡಲು ಆರಂಭಿಸಿದರು ಪ್ರತಿ ಹೊಲದ ಹೆಸರು ಊರಿನ ಹೆಸರು ಅದರ ಸರ್ವೆ ನಂಬರ ಭೂಮಿಯ ವಿಸ್ತೀರ್ಣ ಅದರ ಸ್ವರೂಪ ಮೊದಲಾದ ಮಹತ್ವದ ಅಂಶಗಳನ್ನು ದಾಖಲಿಸುತ್ತಿದ್ದರಲ್ಲದೇ ಯಾವ ಗ್ರಾಮದ ಯಾವ ಹೊಲವನ್ನು ಯಾರ ಹೆಸರಿಗೆ ಅಂದರೆ ಯಾವ ರೈತನಿಗೆ ನೀಡಲಾಗಿದೆ ಎಂದು ಸ್ಪಷ್ಟವಾಗಿ ನಮೂದಿಸುತ್ತಿದ್ದರು. ಹಾಗೂ ಹೊಲಗಳ ಉತಾರಗಳನ್ನು ಕೂಡಾ ಕಾಯ್ದಿರಿಸಿದರು ಯಾವ ರೈತ ಯಾವ ಜಮೀನಿನಲ್ಲಿ ಎಷ್ಟು ಎಕರೆ ಮತ್ತು ಯಾವ ಯಾವ ಬೆಳೆಗಳನ್ನು ಬೆಳೆದನೆಂಬುದನ್ನು ಕೂಡಾ ನಮೂದಿಸುತ್ತಿದ್ದರಲ್ಲದೆ ವಾರ್ಷಿಕ ಖರ್ಚು ವೆಚ್ಚಗಳ ಕುರಿತಾಗಿಯೂ ಆಯವ್ಯಯವನ್ನು ರೂಪಿಸಿದರು ಮುಂದೆ ಬರುಬರುತ್ತಾ ವಾರ್ಷಿಕವಾಗಿ ಎಷ್ಟು ಆದಾಯ ಬಂದಿತು ಮತ್ತು ಎಷ್ಟು ಖರ್ಚುಯಿತೆಂದು ಸ್ಪಷ್ಟವಾಗಿ ಉಲ್ಲೇಖಿಸುವ ಪದ್ದತಿ ಜಾರಿಗೋಳಿಸಿದ್ದರಿಂದ ಯಾವ ರೈತನಾಗಲಿ ಈ ರೀತಿ ಮೊಸ ಮಾಡಲು ಆಸ್ಪದ ನೀಡಲಿಲ್ಲ. ಹೀಗಿದ್ದಾಗ್ಯೂ ಕೂಡಾ ಹಲವಾರು ರೈತರು ದಾವೆ ಹೂಡುತ್ತಿದ್ದರು ದೇಸಾಯಿಗಳು ಮೋಸ ವಂಚನೆಗಳಿಗೆ ಅವರು ಆಸ್ಪದ ನೀಡುತ್ತಿರಲಿಲ್ಲವೆಂದು ಹೇಳಬಹುದು. ಆದರೂ ಕೊಡಲು ತಾವು ಅಸಮರ್ಥರಾಗಿದ್ದೇವು. ತಮ್ಮಲ್ಲಿ ಆ ಶಕ್ತಿ ಇಲ್ಲ ಸಂಪೂರ್ಣ ಬರಗಾಲ ಇಲ್ಲವೆ ಅತಿವೃಷ್ಟಿಯಾಗಿದೆ ಎಂದು ಹೇಳಿದ ರೈತರನ್ನಂತೂ ಒಂದು ಪೈಸೆಯನ್ನು ಕೇಳುತ್ತಿರಲಿಲ್ಲ ಅಂತಹ ಉದಾಹರಣೆಗಳು ಕೂಡಾ ಸಾಕಷ್ಟು ಸಿಗುತ್ತವೆಂದು ಹೇಳಬಹುದು. ತಮ್ಮ ವಾಡೆ ಜಮೀನುಗಳಲ್ಲಿ ಕೆಲಸ

ಮಾಡುವ ಆಳುಗಳಿಗೆ ಕೂಡಾ ಕಟ್ಟುನಿಟ್ಟನ ಕ್ರಮಗಳನ್ನು ವಿಧಿಸುತ್ತಿದ್ದರು ಅವರಲ್ಲಿಯೂ ಶಿಸ್ತು ನಿಯಮ ಪಾಲನೆಗೆ ಮಾತ್ರ ಪ್ರೋತ್ಸಹ ನೀಡುತ್ತಿದ್ದರು ಯಾವುದೇ ಕಾರಣಕ್ಕೂ ಅವರ ಅವಿಧೇಯರಾಗಿ ನೆಡೆಯುವಂತಿಯೂ ಅಥವಾ ಕೆಲಸಕ್ಕೆ ತಡವಾಗಿ ಬರುವದಾಗಲಿ ಇಲ್ಲವೇ ಬೇಗ ಹೋಗುವದಾಗಲಿ ಅವಕಾಶ ನೀಡುತ್ತಿರಲಿಲ್ಲ. ಪ್ರತಿದಿನ ವಾರ, ತಿಂಗಳುಗಳು ಲೆಕ್ಕದಲ್ಲಿ ಪ್ರತಿ ಆಳಿನ ಹೆಸರು ವಾರ ಆತನು ಕೆಲಸಕ್ಕೆ ಬಂದ ವಿವರಗಳನ್ನು ಕ್ರಮಬದ್ಧವಾಗಿ ಬರೆದಿಡಲು ಹಾಜರಿ ಪುಸ್ತಕ ಆರಂಭಿಸಿದರು ಯಾವುದೇ ಆಳು ಗೈರುಹಾಜರಾದರೆ ಆತನು ಹೆಸರಿನ ಮುಂದೆ ವಾರ ಮತ್ತು ವಾರದಿನ ಸಮೇತವಾಗಿ ಒಂದು ಗೆರೆಯನ್ನು ಎಳೆಯಲಾಗುತ್ತಿತ್ತು ಆತನು ಹಾಜರಾದರೆ ಮುಂದೆ ಒಂದು ಎಂಬ ಅಂಕಿಯನ್ನು ಬರೆದು ಆ ವಾರ ಎಷ್ಟು ದಿನ ದುಡಿದಿದ್ದಾನೆ ಎಂದು ಒಟ್ಟಾರೆ ಲೆಕ್ಕ ಬರೆದು ಆ ಪ್ರಕಾರವಾಗಿಯೇ ಕೂಲಿಯನ್ನು ನೀಡುತ್ತಿದ್ದರು. ಕೂಲಿ ನೀಡುವಾಗ ಪ್ರತಿಯೊಬ್ಬ ಆಳಿನ ಹೆಸರಿನ ಮುಂದೆ ಸಹಿ ಮಾಡಿಕೊಳ್ಳಲಾಗುತ್ತಿತ್ತು.

ಕೆಲಸಕ್ಕೆ ಬರುವ ಆಳುಗಳಿಗೆ ಒಂದು ಶಿಸ್ತಿನ ಕ್ರಮವನ್ನು ವಿಧಿಸಲಾಗಿತ್ತು ಅವರು ಯಾವುದೇ ಕಳುವು ಮಾಡುವದಾಗಲೀ ಅಥವಾ ಸುಳ್ಳ ಹೇಳುವದಾಗಲಿ ದೇಸಾಯಿಗಳಿಗೆ ಕಂಡು ಬಂದರೆ ಅವರು ಸಹಿಸಿಕೊಳ್ಳುತ್ತಿರಲಿಲ್ಲ ಒಂದು ವೇಳೆ ಅವರಿಗೆ ಅನಾರೋಗ್ಯ ಕಾಡಿದರೆ ಅವರನ್ನು ಸ್ವತಃ ವೈದ್ಯರಿಂದ ಪರಿಕ್ಷೆಗೊಳಪಡಿಸುತ್ತಿದ್ದರು ಅವರ ಆರೋಗ್ಯದ ಖರ್ಚುನ್ನು ಕೂಡಾ ಅವರೇ ಭರಿಸುತ್ತಿದ್ದರು. ನೋಡಿದರೆ ಕೂಲಿಗಳ ಮೇಲೂ ಕೂಡಾ ಅವರು ಎಂತಹ ಕಾಳಜಿ ವಹಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ ಅವರಿಗೇನಾದರೂ ತೊಂದರೆಯಾದರೂ ಕೂಡಾ ಅವರನ್ನು ಕೆಲಸಕ್ಕೆ ತೋಡಗಿಸಿಕೊಳ್ಳತ್ತಿರಲಿಲ್ಲ, ಜೊತೆಗೆ ಅವರ ಸಂಬಳವನ್ನು ದಾರಾಳವಾಗಿಯೇ ನೀಡುತ್ತಿದ್ದರು ಯಾವುದೇ ಕಾರಣಕ್ಕೂ ಕೂಲಿಗಳಿಗೆ ಸಂಬಳವನ್ನು ಮಾತ್ರ ತಡೆಹಿಡಿಯುತ್ತಿರಲಿಲ್ಲ.

ವಾಡೆಯಲ್ಲಿದ್ದ ಪ್ರತಿಯೊಂದು ಸಾಮಾನು ಅಂದರೆ ಕೃಷಿಗೆ ಸಂಭಂಧಿಸಿದ ಸಲಕರಣೆಗಳು ಅಡಿಗೆ ಬೆಳ್ಳಿ ಬಂಗಾರದ ಸಾಮಾನುಗಳು ವಸ್ತ್ರ ವೈಖರಿಗಳನ್ನೆಲ್ಲಾ ಕುರಿತಂತೆ ಲೆಕ್ಕ ಪತ್ರಗಳನ್ನಿಡುತ್ತಿದ್ದರೆ ಅದಕ್ಕೊಸ್ಕರವೇ ಒಬ್ಬನನ್ನು ನೇಮಿಸಿಕೊಂಡಿದ್ದರು ಆತನು ಪ್ರತಿ ಸಾಮಾನುಗಳ ಕುರಿತಂತೆ ಕಾಲಕಾಲಕ್ಕೆ ಸರಿಯಾದ ಲೆಕ್ಕ ಪತ್ರಗಳನ್ನಿಡಬೇಕಿತ್ತು. ಯಾವುದೇ ಒಂದು ಸಾಮಾನು ಅಲ್ಲಿಂದ ಕದಲಿದರೆ ಅದನ್ನು ತಕ್ಷಣವೇ ಗೃಹಿಸುತ್ತಿದ್ದ ದೇಸಾಯಿಯರು ಆ ಕುರಿತು ಕೇಳಿಯೇ ಬಿಡುತ್ತಿದ್ದರು ಅಂತಹ ಬುದ್ದಿಶಕ್ತಿ ಅವರಲ್ಲಿತ್ತು. ಈ ಕಾರಣದಿಂದಲೇ ವಾಡೆಯಲ್ಲಿ ಯಾವುದೇ ರೀತಿಯ ಅವಗಡಗಳಾಗುತ್ತಿರಲಿಲ್ಲ. ಆ

ಕಾರಣಕ್ಕಾಗಿಯೇ ಲೆಕ್ಕ ಪತ್ರಗಳನ್ನು ಇಡುವ ಪದ್ಧತಿಯನ್ನು ಕಟ್ಟು ನಿಟ್ಟಾಗಿ ಪಾಲಿಸಿಕೊಂಡು ಬಂದರೆಂದು ತಿಳಿಯುತ್ತದೆ. ಹೀಗೆ ವಾಡೆಯಲ್ಲಿನ ಎಲ್ಲ ಸಾಮಾನುಗಳನ್ನು ಒಂದೆಡೆ ಇರಿಸಿ ಅವುಗಳ ವರ್ಗೀಕೃತ ಪಟ್ಟಿಯನ್ನು ಮಾಡಲಾಯಿತು ಮತ್ತು ಅವುಗಳನ್ನು ಕಾಯ್ದಿರಿಸಿದ ಸ್ಥಳದಲ್ಲಿಯೇ ಇಡಬೇಕಿತ್ತು ಅವುಗಳಿಗೆ ಸಂಖ್ಯೆಗಳನ್ನು ನೀಡಿ ಪುಸ್ತಕದಲ್ಲಿ ಸಮೂದಿಸುತ್ತಿದ್ದರು. ಯಾರು ಯಾವ ಸಾಮಾನುಗಳನ್ನು ಒಯ್ಯುತ್ತಾರೋ ಆಗ ಅವರು ಸಹಿ ಮಾಡಿ ಒಯ್ಯಬೇಕು ಮತ್ತು ತಿರುಗಿ ಅದು ಇದ್ದ ಸ್ಥಳದಲ್ಲಿಯೇ ಇಟ್ಟು ಮತ್ತೆ ಸಹಿ ಮಾಡಬೇಕಿತ್ತು. ಪ್ರತಿ ವರ್ಷ ಅವುಗಳ ಎಣಿಕೆ ಮಾಡಲಾಗುತಿತ್ತು.

ದೈನಂದಿನ ಲೆಕ್ಕ ಪತ್ರದಲ್ಲಿಯೂ ಇಲ್ಲಿ ವ್ಯವಸ್ಥಿತತೆಯನ್ನು ಕಾಣುತ್ತೆವೆ ಪ್ರತಿ ದಿನ ಲೆಕ್ಕವನ್ನು ಆ ದಿನವೇ ಮಾಡಬೇಕೆಂದು ಕಾರಕೂನರಿಗೆ ಆದೇಶಿಸಲಾಗಿತ್ತು.

ಕಾರಕೂನನು ಬರೆದ ಲೆಕ್ಕವನ್ನು ಪರಿಶೀಲಿಸಿ ಅದನ್ನು ದೃಡಪಡಿಸಿ ಅದಕ್ಕೆ ರುಜು ಹಾಕುತ್ತಿದ್ದರು. ಅದರಂತೆ ಉಗ್ರಾಣಗಳಲ್ಲಿ ಸಂಗ್ರಹಿಸಿಟ್ಟಿರುವ ಧಾನ್ಯಗಳ ಕುರಿತಾಗಿಯೂ ಲೆಕ್ಕ ಪತ್ರಗಳನ್ನು ಇಡಲಾಗುತ್ತಿತ್ತು, ಈ ಪೂರ್ವದಲ್ಲಿ ಉಗ್ರಾಣದಲ್ಲಿದ್ದ ಧಾನ್ಯ ಸಂಗ್ರಹವೆಷ್ಟು, ವ್ಯಯವಾದ ಧಾನ್ಯವೆಷ್ಟು ಮತ್ತು ಯಾರಿಗೆ ಎಷ್ಟು ನೀಡಲಾಯಿತೆಂದು ಕೂಡಾ ಕಾರಕೂನರು ಲೆಕ್ಕವನ್ನು ಇಡಬೇಕಿತ್ತು ಇದರೊಂದಿಗೆ ಮೇವಿನ ಕುರಿತಾಗಿಯೂ ಲೆಕ್ಕವನ್ನು ಇಡುತ್ತಿದ್ದರು ದನ, ಮೇವು, ಆಹಾರ ದಾನ್ಯಗಳು ಮೊದಲಾದವುಗಳನ್ನು ನೋಡಿಕೊಳ್ಳಲೂ ಕೊತ್ವಾಲರನ್ನು ನೇಮಿಸಿದ್ದರು ಇವುಗಳು ಒಂದು ವೇಳೆ ಏನಾದರೂ ನಷ್ಟವಾದರೂ ಸ್ವಂತ ಆತನೇ ದಂಡ ಭರಿಸಬೇಕಿತ್ತು. ಇದು ಆತನು ನಿರ್ಲಕ್ಷ್ಯ ತೋರದಿರಲೆಂದೇ ಎಂಬುದಾಗಿತ್ತು. ಎಲ್ಲ ದೇಸಾಯಿಗಳ ಕಾಲದಲ್ಲಿ ಈ ವ್ಯವಸ್ಥೆಗೆ ಬಿಗಿ ಬದ್ರತೆಯನ್ನು ಪಾಲಿಸಲು ಮಹತ್ವತೆಯನ್ನು ನೀಡಲಿಲ್ಲ ಇವರು ಉದಾರವಾದಿಗಳಾಗಿದ್ದರಿಂದ ಯಾರ ತಪ್ಪನ್ನು ದೊಡ್ಡದಾಗಿ ಪರಿಗಣಿಸುತ್ತಿರಲಿಲ್ಲ ತಮ್ಮ ಮನಬಂದಂತೆ ದಾನ ಧರ್ಮ ಕಾರ್ಯಗಳನ್ನು ನಿರ್ವಹಿಸಿಕೊಂಡು ಬಂದರು. ಆದರೂ ಸಂಪ್ರದಾಯದಂತೆ ನಡೆದುಕೊಂಡು ಬಂದ ಲೆಕ್ಕ ಪತ್ರಗಳನ್ನು ಗಮನಿಸಿ ಆ ಕುರಿತು ತಮ್ಮ ಕಾರಕೂನರೊಂದಿಗೆ ಚರ್ಚಿಸುತ್ತಿದ್ದರು ಯಾರಿಗಾಗಲಿ ಕಾಣಿಕೆ ನೀಡಲಿ ದಾನ ನೀಡಲಿ ಆ ಬಗ್ಗೆ ದಾಖಲೆಯನ್ನು ಇಡುವುದು ವಾಡಿಕೆಯಾಗಿತ್ತು. ಇವರು ರೈತರಾದ್ದರಿಂದಲೇ ರೈತರ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಇವರು ಮೊದಮೊದಲು ನಿರ್ಲಕ್ಷ ಭಾವನೆ ತಳೆದು ಯಾವುದೇ ಲೆಕ್ಕ ಪತ್ರಗಳಲ್ಲದೇ ಮನೆ ಭೂಮಿಯನ್ನು ಬಾಡಿಗೆಗೆ ನೀಡುತ್ತಿದ್ದರು. ಆದರೆ ರೈತರು ಮೋಸ ಮಾಡುವದನ್ನರಿತ ಇವರು ನಂತರ ಲೆಕ್ಕ

ಪತ್ರ ಮುಖಾಂತರವೇ ವ್ಯವಹಾರಗಳನ್ನು ಪ್ರಾರಂಭಿಸಿದರು ಇವರು ವ್ಯವಹಾರ ಚತುರರಾಗಿದ್ದರೂ ಕೂಡಾ ಪ್ರತಿ ವಿಷಯವನ್ನು ವ್ಯಾಪಾರಿ ದೃಷ್ಟಿಕೋನದಲ್ಲಿ ಅಳೆಯುತ್ತಿರಲಿಲ್ಲ ಎಲ್ಲ ದೇಸಾಯಿಗಳು ಕೂಡಾ ಧನ ದಾನ್ಯಗಳು ಜಮೀನ, ಕೂಲಿಕಾರರಿಗೆ, ರೈತರಿಗೆ ನೀಡಿದ ಮನೆ ಬಾಡಿಗೆ, ಜಮೀನು ಬಾಡಿಗೆ ಅವರಿಂದ ಪಡೆದ ದಾನ್ಯ ಅಥವಾ ಹಣ ಯಾವ ಜಮೀನಿನಲ್ಲಿ ಯಾವ ಬೆಳೆಯನ್ನು ಎಷ್ಟು ಪ್ರಮಾಣದಲ್ಲಿ ಬೆಳೆಯಾಲಾಗುತ್ತಿತ್ತು ಎಂದು ಕ್ರಮಬದ್ದವಾಗಿ ಲೆಕ್ಕ ಪತ್ರವನ್ನಿಡುತ್ತಿದ್ದರು

ಇದು ದೇಸಾಯಿ ಮನೆತನದವರ ಅಚ್ಚುತನ ತಿಳಿಸುತ್ತದೆ. ಅಲ್ಲದೆ ಅತಿ ಚಿಕ್ಕ ಅಂಶವನ್ನು ಕಡೆಗಣಿಸದೇ ಅದನ್ನು ಲೆಕ್ಕ ಇಡುವ ವಾಡಿಕೆ ಮೊದಲಿನಿಂದಲೂ ಬೆಳೆದು ಬಂದಿತು. ಇಂತಹ ವ್ಯವಸ್ಥೆ ಸಮಕಾಲಿನ ದೇಸಗತಿ ಮನೆತನಗಳಲ್ಲಿ ಅಪರೂಪವೆಂದು ಹೇಳಬಹುದು. ಹೀಗೆ ದಿನಾಂಕಗಳ ಸಮೇತ ಯಾವ ದಿನ ಯಾವ ವ್ಯಕ್ತಿಯ ಮೂಲಕ ಎಲ್ಲಿಗೆ ಎಷ್ಟು ಕಳುಹಿಸಲಾಯಿತ್ತೆಂದು ಸ್ಪಷ್ಟವಾಗಿ ನಮೂದಿಸಲಾಗುತ್ತಿತ್ತು. ಎಲ್ಲಿಯಾದರೂ ಹೆಚ್ಚು ಕಡಿಮೆಯಾದರೆ ಅಲ್ಲಿ ಪ್ರಶ್ನಾರ್ಥಕ ಚಿಹ್ನೆ ಇಟ್ಟು ಕಾರಕೂನರಿಗೆ ವಿವರಣೆ ಕೇಳಲಾಗುತ್ತಿತ್ತು. ಯಾವ ಹೊಲದಿಂದ ಎಷ್ಟು ಬಂತು ಎಷ್ಟು ಖರ್ಚಾಯಿತೆಂದು ನಮೂದಿಸುವ ಪದ್ದತಿಯಿಂದ ಯಾರಿಗೂ ಮೋಸ ಮಾಡುವುದು ಸ್ವಲ್ಪ ಕಷ್ಟವೇ ಆಗಿತ್ತು ಇದರಿಂದ ಆರ್ಥಿಕ ಸಮೃದ್ಧಿಗೂ ಕಾರಣವಾಯಿತು.

ಇದರಂತೆಯೇ ಹಲವಾರು ಲೆಕ್ಕ ಪತ್ರಗಳ ಕಡತವನ್ನು ಉದಾಹರಿಸಬಹುದಾಗಿದೆ. ಅವರ ಜಮೀನು ೧೨೦೦೦ ಎಕರೆಗಳಷ್ಟು ಇದ್ದುದರಿಂದ ಕೇವಲ ನೆನಪಿನಲ್ಲಿಟ್ಟುಕೊಳ್ಳವದು ಅಷ್ಟು ಸುಲಭವಲ್ಲ ಆದ್ದರಿಂದಲೇ ಪ್ರತಿ ವ್ಯವಹಾರಗಳನ್ನು ಈ ರೀತಿ ಲೆಕ್ಕ ಪತ್ರಗಳ ಮೂಲಕ ಬರೆದಿಡಲಾಗುತ್ತಿತ್ತು. ಆಯಾ ವರ್ಷದ ಆದಾಯ ವೆಚ್ಚಗಳ ಕುರಿತು ಪೂರ್ವ ನಿರ್ಧರಿತವಾಗಿಯೇ ಅಯವ್ಯಯವನ್ನು ರೂಪಿಸಿ ಅದರಂತೆ ಖರ್ಚು ವೆಚ್ಚಗಳನ್ನು ಮಾಡಲಾಗುತ್ತಿತ್ತೆಂಬ ಅಂಶ ಗಮನಾರ್ಹವಾಗಿದ್ದು ಅದು ಮೊದಲಿನಿಂದಲೂ ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆ.

ಇದೆಲ್ಲ ಜಮೀನಿನಿಂದ ಬರುವ ಆದಾಯವಾದರೆ ಇನ್ನೂ ಕೆಲವು ಮನೆಯ ಬಾಡಿಗೆಯ ಮೂಲಕ ದೇಸಾಯಿಯವರಿಗೆ ಅಧಿಕ ಆಧಾಯ ಬರುತ್ತಿತ್ತೆಂದು ತಿಳಿದು ಬರುತ್ತದೆ. ಆರಂಭದಲ್ಲಿ ದೇಸಾಯಿಗಳು ಮನೆಗಳ ಮೇಲೆ ಬಾಡಿಗೆ ವಿಧಿಸುತ್ತಿರಲಿಲ್ಲ ನಂತರದಲ್ಲಿ ಪತ್ರ ಬರೆಯಾಸಿಕೊಂಡೆ ಮನೆಯನ್ನು ಬಾಡಿಗೆ

ನೀಡಲಾಗುತ್ತಿತ್ತು ಬಾಡಿಗೆಯನ್ನು ಕೂಡಾ ಅತ್ಯಂತ ಕಡೆಮೆ ದರದಲ್ಲಿಯೇ ನೀಡಲಾಗುತ್ತಿತ್ತೆಂದು ತಿಳಿದು ಬರುತ್ತದೆ.

ಅದರಂತೆ ಸಾಲ ಪತ್ರಗಳನ್ನು ಕೂಡಾ ಬರೆಸಿಕೊಳ್ಳವ ಪದ್ದತಿ ಇತ್ತು. ಕೊಟ್ಟ ಸಾಲಕ್ಕೆ ಯಾವುದೇ ರೀತಿಯಾದ ಬಡ್ಡಿಯನ್ನು ಸ್ವೀಕರಿಸುತ್ತಿರಲಿಲ್ಲ ಕೊಟ್ಟ ಹಣಕ್ಕೆ ಭದ್ರತೆ ಸಿಗಲೆಂದು ಈ ರೀತಿ ಸಾಲಪತ್ರಗಳನ್ನು ಬರೆಯಿಸಿಕೊಳ್ಳುತ್ತಿದ್ದರು.

ಕೃಷಿ ವ್ಯವಸಾಯದೊಂದಿಗೆ ಅದಕ್ಕೆ ಹೊಂದಿಕೊಂಡಂತೆ ಅನೇಕ ಉಪಕಸಬುಗಳು ಅಸ್ತಿತ್ವದಲ್ಲಿದ್ದು ಅವರೆಲ್ಲ ತಮ್ಮ ತಮ್ಮ ವೃತ್ತಿಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು ಹೀಗೆ ಅಸ್ತಿತ್ವದಲ್ಲಿದ್ದ ವೃತ್ತಿಗಳೆಂದರೆ ಬಡಿಗ, ಕಮ್ಮಾರ, ಚಮ್ಮಾರ, ಕುಂಬಾರ, ಕಂಚುಗಾರರು ಮೊದಲಾದವರು. ಬಡಿಗನು ತನ್ನ ವೃತ್ತಿಗೆ ಪ್ರತಿರೂಪವಾಗಿ ಜೂಡಿಯನ್ನು ಇನ್ನೂ ಕೆಲವು ಸಮಯದಲ್ಲಿ "ಆಯಾ"ವನ್ನು ಪಡೆಯುತ್ತಿದ್ದನು. ಕೃಷಿಗೆ ಸಂಬಂಧಿಸಿದ ಉಪಕರಣಗಳನ್ನು ರೈತರಿಗೆ ಒದಗಿಸುವ ವೃತ್ತಿ ಈತನದಾಗಿತ್ತು. ಅದರಂತೆ ಕಮ್ಮಾರನು ಕೂಡಾ ಆಯುಧಗಳನ್ನು ಮಾಡುವ ಮತ್ತು ಕೃಷಿಗೆ ಉಪಕರಣಗಳನ್ನು ಒದಗಿಸುತ್ತಿದ್ದನು. ಚಮ್ಮಾರನು ಕೂಡಾ ಚರ್ಮದ ಸಲಕರಣೆಗಳನ್ನು ಮತ್ತು ಪಾದರಕ್ಷೆಗಳನ್ನು ಮಾಡುವ ವೃತ್ತಿಯನ್ನಾಧರಿಸಿ ತನ್ನ ಜೀವನವನ್ನು ಸಾಗಿಸುತ್ತಿದ್ದನು ಇವರು ಕೆಲವು ಸಮಯದಲ್ಲಿ ಭೂಮಿ (ಜೂಡಿ)ಯನ್ನು ಪಡೆದು ಅದರಲ್ಲಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರಲ್ಲದೆ ಇನ್ನೂ ಕೆಲವು ಸಮಯದಲ್ಲಿ ವಾರ್ಷಿಕವಾಗಿ "ಆಯಾ" ಎಂದು ದಾನ್ಯಗಳ ರೂಪದಲ್ಲಿ ತಮ್ಮ ವೃತ್ತಿ ಫಲವನ್ನು ಪಡೆಯುತ್ತಿದ್ದರು.

ಹನಗಂಡಿ ದೇಸಗತಿ ಕಾಲದಲ್ಲಿ ಅಲ್ಲಿಯ ವ್ಯಾಪಾರ ವಹಿವಾಟು ಕೂಡಾ ಅಷ್ಟೇ ಸಮೃದ್ಧವಾಗಿತ್ತು ತಾವು ಬೆಳೆದ ಆಹಾರ ದಾನ್ಯಗಳು ಮತ್ತು ವಾಣಿಜ್ಯ ಬೆಳೆಗಳನ್ನು ಮಾರುಕಟ್ಟೆಗೆ ತಂದು ಮಾರಾಟ ಮಾಡುತ್ತಿದ್ದರು. ವಾರ್ಷಿಕವಾಗಿ ತಮ್ಮ ಉಪಜೀವನಕ್ಕೆ ಬೇಕಾಗುವಷ್ಟು ದಾನ್ಯಗಳನ್ನು ಇಟ್ಟುಕೊಂಡು ಉಳಿದಿದ್ದನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದರು. ಜೋಳ, ಗೋದಿ, ಶೇಂಗಾ, ಗೋವಿನ ಜೋಳ, ಹತ್ತಿ, ಕುಸುಬಿ ಮೊದಲಾದ ದಾನ್ಯಗಳನ್ನು ತೇರದಾಳ, ಜಮಖಂಡಿ, ಬನಹಟ್ಟಿ, ಮಿರಜ, ಸಾಂಗಲಿ, ಕೊಲ್ಹಾಪೂರಗಳಲ್ಲಿಯ ಮಾರುಕಟ್ಟೆಗಳಿಗೆ ವಹಿವಾಟು ಮಾಡುತ್ತಿದ್ದರು.

ಪ್ರಾಚೀನ ಕಾಲದಿಂದಲೂ ವ್ಯಾಪಾರ ವಹಿವಾಟು ನಡೆಯುತ್ತಿದ್ದುದು ಎತ್ತಿನ ಬಂಡೆಗಳ ಮತ್ತು ಪ್ರಾಣಿಗಳ ಮೂಲಕ ಸರಕುಗಳನ್ನು ಸಾಗಿಸಲಾಗುತ್ತಿತ್ತು. ಆ ಅವಧಿಯಲ್ಲಿ ಈಗಿನಂತೆ ರಸ್ತೆ ವಾಹನಗಳ

ಸೌಲಭ್ಯ ಇರಲಿಲ್ಲವಾದರಿಂದ ಹೆಚ್ಚಾಗಿ ಎತ್ತಿನ ಬಂಡೆಗಳ ಮೂಲಕವೇ ವ್ಯಾಪಾರವನ್ನು ನಡೆಸಲಾಗುತ್ತಿತ್ತು.

ಹೀಗೆ ಹನಗಂಡಿ ದೇಸಗತಿಯವರ ಒಡೆತನದಲ್ಲಿ ಕೃಷಿ ಸಮೃದ್ಧಿಯನ್ನು ಪಡೆದು ವ್ಯಾಪಾರ ವಾಣಿಜ್ಯವು ಹೆಚ್ಚಾಗಿ ಅರ್ಥಿಕ ಸಮೃದ್ಧಿಗೆ ಕಾರಣವಾಯಿತು.

## ಕಂದಾಯ ವ್ಯವಸ್ಥೆ

ದೇಸಗತಿಗಳಲ್ಲಿನ ಜಮೀನುಗಳು ರೈತವಾರಿ ಪದ್ದತಿಯನ್ನವಲಂಬಿಸಿದ್ದವು ಸರಕಾರವು ಸರಪಳಿಯಿಂದ ಭೂಮಿಯನ್ನು ಅಳೆಯುವ ವ್ಯವಸ್ಥೆಯನ್ನು ಜಾರಿಗೊಳಿಸಿತು. ಈ ಸರಪಳಿಗೆ "ತನಾಬ" ಎಂದು ಕರೆಯುತ್ತಿದ್ದರು. ಭೂ ಮಾಪನ ಮಾಡುವ ಕಾರ್ಯವು ಕಂದಾಯ ಇಲಾಖೆಗೆ ಸೇರಿದ್ದಾಗಿತ್ತು. ಭೂಮಿಯ ಪಲವತ್ತತೆಯ ಅನುಗುಣವಾಗಿ ಕೃಷಿ ಭೂಮಿಯನ್ನು ಸ್ಥರವಾಗಿ ವಿಭಾಗಿಸಿ ಆ ಪ್ರಕಾರವೇ ಕಂದಾಯನ್ನು ನಿಗದಿಗೊಳಿಸಲಾಗಿತ್ತು ಹೀಗೆ ಭೂಮಿಯು ಫಲವತ್ತತೆಯಿಂದ ಕೂಡಿದ್ದು, ಮತ್ತು ನೀರಾವರಿಗೊಳಪಟ್ಟಿದ್ದರೆ ಸಾಮಾನ್ಯವಾಗಿಯೇ ಅಂತಹ ಕೃಷಿ ಭೂಮಿಯ ಕಂದಾಯವು ಹೆಚ್ಚಿದ್ದಿತು ಏಕೆಂದರೆ, ಅಂತಹ ಪ್ರದೇಶದಲ್ಲಿ ಹೆಚ್ಚು ಉತ್ಪನ್ನ ಬರುತ್ತದೆಯಲ್ಲದೇ ವರ್ಷಕ್ಕೆ ಕಡಿಮೆ ಎಂದರೂ ಎರಡು ಬೆಳೆಗಳನ್ನಾದರೂ ಬೆಳೆಯಲಾಗುತ್ತಿತ್ತು. ಫಲವತ್ತತೆ ಅನುಸಾರವಾಗಿ ೧/೧೦ ಭಾಗದಷ್ಟು ಕಂದಾಯ ವಸೂಲಿ ಮಾಡಲಾಗುತ್ತಿತ್ತು (೧) ಆದರೆ ಹನಗಂಡಿ ದೇಸಾಯಿಗಳು ಹೆಚ್ಚು ಜನ ಪ್ರೀತಿಗೆ ಕಾರಣರಾದದ್ದು ರೈತರಿಗೆ ತೇರಿಗೆ ಭಾರ ಹೇರದೆ ಕಡಿಮೆ ತೆರಿಗೆಯನ್ನು ವಸೂಲಿ ಮಾಡುತ್ತಿದ್ದುದು ಇದರೊಂದಿಗೆ ಜಾಗೀರು, ಇನಾಂ, ಅಗ್ರಹಾರ ಮತ್ತು ವಕ್ಫಗಳಂತಹ ತೆರೆಗೆ ಪದ್ದತಿಯೂ ಜಾರಿಯಲ್ಲಿತ್ತು. ಸರಕಾರಕ್ಕೆ ಯುದ್ದದಿಂದ ಗೆದ್ದು ಅಥವಾ ಕೊಳ್ಳೆಹೊಡೆದು ತಂದ ಸಂಪತ್ತು ಸೇರಿದಿದ್ದವು. ಕಪ್ಪು ಕಾಣಿಕೆ ತೆರಿಗೆಗಳು ಮತ್ತು ವಿಶೇಷ ಸಂದರ್ಭಗಳಲ್ಲಿ ರಾಜನಿಗೆ ದೊರೆಯುತ್ತಿದ್ದ ಕಾಣಿಕೆಗಳು ಸೇರಿದ್ದವು.

ಕ್ರಿ.ಶ. ೧೮-೧೯ನೇ ಶತಮಾನದಲ್ಲಿ ಹನಗಂಡಿಯ ದೇಸಗತಿಯ ಹಲವು ಭಾಗವು ಕೃಷಿ ಸಾಗುವಳಿ ಭೂಮಿಯಾಗಿರಲಿಲ್ಲ. ಕಾರಣ ಅಲ್ಲಿ ಯಾವುದೇ ನೀರಾವರಿ ವ್ಯವಸ್ಥೆಯೂ ಇರಲಿಲ್ಲ ಬರಡು ಭೂಮಿಯಾಗಿದ್ದರಿಂದ ಕೃಷಿ ಜಮೀನ ವಿಸ್ತಾರವಾಗಿರಲಿಲ್ಲವೆಂದು ತೋರುತ್ತದೆ. ಇಂತಹ ಬರಡು ಭೂಮಿಯನ್ನು ಕೃಷಿ ಭೂಮಿಗೆ ಪರಿವರ್ತಿಸುವದಕ್ಕೋಸ್ಕರ ಅದನ್ನು "ಜೂಡಿ" ಹಾಕಿ ಕೊಡಲಾಯಿತೆಂದು ತಿಳಿದು ಬರುತ್ತದೆ.

ಇಂತಹ ಆಡಳಿತ ವ್ಯವಸ್ಥೆಯು ಬ್ರಿಟೀಷರ ಕಾಲದಲ್ಲಿಯ ಹೊಸ ವ್ಯವಸ್ಥೆಯೇನು ಆಗಿರಲಿಲ್ಲ.

ಅದಕ್ಕಿಂತ ಮುಂಚಿನ ಕಾಲದಲ್ಲಿ ಈ ವ್ಯವಸ್ಥೆ ಇತ್ತು. ಅಲ್ಲಿಂದ ಬ್ರಿಟೀಷರ ಈಸ್ಟ ಇಂಡಿಯಾ ಕಂಪನಿಯು ಅದನ್ನು ಮುಂದುವರೆಸಿಕೊಂಡು ಬಂದಿತು. ಸಾಂಗಲಿ ಸಂಸ್ಥಾನದಲ್ಲಿ "ಮಾಮ್ಲೆದಾರ" ಎಂದು ನೇಮಿಸಲಾಗುತ್ತಿದ್ದ ಇವರನ್ನು ಪರಗಣೆಯ ಮುಖ್ಯಸ್ಥರೆಂದು ಪರಿಗಣಿಸಲಾಗುತ್ತಿತ್ತು. ದೇಸಾಯಿಯ ಇಚ್ಛೆಯಂತೆ ನೇಮಕಗೊಂಡ ಈತನಿಗೆ ತೆರಿಗೆ ವಸೂಲಿ ವಿಷಯಕ್ಕೆ ಸಂಬಂಧಿಸಿದಂತೆ ವಿಶಾಲ ಅಧಿಕಾರಗಳಿದ್ದವು ಯಾವುದೇ ವತನ ಭೂಮಿಯ ರಜಿಸ್ಟರ ಪತ್ರಗಳು ಈತನ ಮುಖಾಂತರವೇ ರವಾನಿಸಲ್ಪಡುತ್ತಿದ್ದವು.(೨)

ಕ್ರಿ.ಶ.೧೮೫೦ ರಷ್ಟೋತ್ತಿಗಾಲೇ ಬ್ರೀಟಿಷರು ಭಾರತದಲ್ಲಿ ಪ್ರತ್ಯೇಕ ಕಂದಾಯ ಇಲಾಖಾ ಕೇಂದ್ರಗಳನ್ನು ತೆರೆದಿದ್ದರು. ಈ ಕಛೇರಿಗಳಲ್ಲಿ ಮಾಮ್ಲೆದಾರ, ಶಿರಸ್ತೆದಾರ, ಖಜಾಂಚಿ ಹೀಗೆ ಅನೇಕ ಅಧಿಕಾರಗಳನ್ನು ನೇಮಿಸಲಾಯಿತು. ಇದರಿಂದ ಕಂದಾಯಕ್ಕೆ ಸಂಬಂಧಿಸಿದ ಪ್ರತಿ ತಾಲೂಕುಗಳಲ್ಲಿ ಇಂತಹ ಕಛೇರಿಗಳನ್ನು ಸ್ಥಾಪಿಸಿ ಆ ಮೂಲಕ ಆಡಳಿತವನ್ನು ಸರಳೀಕರಣಗೊಳಿಸಲಾಗಿತ್ತು.

ಮುಂಬಯಿಯ ವತನ ಪದ್ದತಿಯ ರದ್ದತಿ ಕಾದ್ದೆಯು ಕ್ರಿ.ಶ.೧೯೫೫ ರಂದು ಜಾರಿಗೆ ಒಂದು ಸರಕಾರಕ್ಕೆ ಪೂರ್ಣ ಪ್ರಮಾಣದ ಕಂದಾಯ ನೀಡುವ ನಿಯಮ ಜಾರಿಗೆ ಬಂದಿತು. ಈ ದೇಸಾಯಿಯವರ ವತನೀನ ಆರು ಪಟ್ಟು ತುಂಬಿ "ರಿಗ್ರಾಂಟ್" ಮಾಡಿಸಿಕೊಂಡಿದ್ದನ್ನು ಕಾಣಬಹುದಾಗಿದೆ ಈ ಪ್ರಕಾರವಾಗಿ ಈ ಮೊದಲು ಕಂದಾಯದ ಕೆಲವು ಭಾಗಮಾತ್ರ (ಜೂಡಿ) ಸರಕಾರಕ್ಕೆ ಸೇರುತ್ತಿತ್ತು. ಅಂದರೆ ಈ ಕಾಯ್ದೆ ಬಂದ ಮೇಲೆ ಪೂರ್ಣ ಪ್ರಮಾಣದ ನಿಗದಿತ ಕಂದಾಯವನ್ನು ಸರಕಾರಕ್ಕೆ ತುಂಬುವ ವ್ಯವಸ್ಥೆ ಜಾರಿಗೆ ಬಂದಿತು. ಅಂದರೆ ಕ್ರಿ.ಶ.೧೯೫೦ ರಲ್ಲಿ ಬಾಂಬೆ ಪರಗಣಾ ವತನ ಕಾಯ್ದೆ ಜಾರಿಗೆ ಬಂದಿತು ಆ ಪ್ರಕಾರ ಒಟ್ಟು ಕಂದಾಯದ ೫೦೦೦ರೂ.ಗಳಲ್ಲಿ ೮೦೦ರೂಪಾಯಿಗಳನ್ನು ಸರಕಾರಕ್ಕೆ ತುಂಬುತ್ತಿದ್ದದ್ದು ತಿಳಿದರೆ ಉಳಿದ ಭಾಗವನ್ನು ತಾವೇ ಉಪಯೋಗಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಮುಂದೆ ಕ್ರಿ.ಶ.೧೯೫೫ ರ ಕಾಯ್ದೆ ಈ ಪದ್ದತಿಯನ್ನು ರದ್ದುಗೊಳಿಸಿತು.

ಹನಗಂಡಿ ದೇಸಾಯಿಗಳು ತಮ್ಮ ವತನ ಭೂಮಿಯನ್ನು ಬಾಡಿಗೆಗೆ ಕೊಟ್ಟು ರೈತದಿಂದ ಕೃಷಿ ಮಾಡಿಸುತ್ತಿದ್ದರೆಂಬುದಕ್ಕೆ ಅವರ ಬಾಡಿಗೆ ಪತ್ರಗಳು ಸಾಕ್ಷಿ ನೀಡುತ್ತವೆ. ದೇಸಾಯಿಗಳೆಂದು ರೈತರ ಮೇಲೆ ಈ ಕುರಿತು ಯಾವುದೇ ಕಿರಿಕಿರಿ ಮಾಡುತ್ತಿರಲಿಲ್ಲ ಎಂಬ ಅಂಶ ಅಲ್ಲಿ ಕೆಲವು ವಯೋವೃದ್ಧರನ್ನು ಸಂಪರ್ಕಿಸಿದಾಗ ತಿಳಿದು ಬರುತ್ತದೆ. ನಿರ್ದಿಷ್ಟ ಪಡೆಸಿದ ಅವಧಿಗೆ ನಿರ್ದಿಷ್ಟ ಪಡೆಸಿದ ಭೂಮಿಯನ್ನು

ರೈತರಿಗೆ ನೀಡಿ ಒಪ್ಪಂದದ ಪತ್ರವನ್ನು ಬರೆಯಿಸಿಕೊಳ್ಳಲಾಗುತ್ತಿತ್ತು. ಈ ಒಪ್ಪಂದದ ಪ್ರಕಾರವೇ ಬಾಡಿಗೆ ಪಡೆದ ರೈತರು ನಡೆದುಕೊಳ್ಳಬೇಕಿತ್ತು ಒಂದು ವೇಳೆ ಅದಕ್ಕೆ ತಪ್ಪಿದಲ್ಲಿ ಕೋರ್ಟಿನಲ್ಲಿ ದಾವೆ ಹೂಡಲಾಗುತಿತ್ತು. ಹೀಗೆ ನಿಗದಿ ಪಡೆಸಿದ ಕಂದಾಯವನ್ನು ಅಥವಾ ಬಾಡಿಗೆಯನ್ನು ಕೊಡದೆ ಇದ್ದವರ ವಿರುದ್ಧ ಏಕಕಾಲದಲ್ಲಿ ಸಾಕಷ್ಟು ಜನರ ವಿರುದ್ಧ ದಾವೆ ಹೂಡಿದ ಉಲ್ಲೇಖವನ್ನು ಅವರ ಮನೆಯಲ್ಲಿಯೇ ದೊರೆತ ದಾಖಲೆಗಳನ್ನು ವೀಕ್ಷಿಸಿದರೆ ಕೆಲವು ಅಂಶಗಳು ಬೆಳಕಿಗೆ ಬರುತ್ತವೆ. ಮನೆ ಬಾಡಿಗೆ ದಾಖಲೆಗಳು, ಸಾಲಪತ್ರಗಳು, ಕೃಷಿ ಜಮೀನಿನ ಬಾಡಿಗೆ ಪತ್ರಗಳನ್ನು ನೋಡಲಾಗಿ ಅವುಗಳ ಭಾಷಾಶೈಲಿ ಬರವಣಿಗೆಗಳು ವಿಶಿಷ್ಟವಾಗಿದೆ ಇಂಗ್ಲೀಷ ಭಾಷೆಗೆ ಹೆಚ್ಚು ಮಹತ್ವವಿದ್ದರೂ ಮರಾಠಿ ಪ್ರಭಾವವು ಹೆಚ್ಚಾಗಿದ್ದು ಕನ್ನಡದಲ್ಲಿ ಬರೆದ ಹಲವು ದಾಖಲೆಗಳಲ್ಲಿ ಕೆಲವು ಮರಾಠ ಪದ ಪ್ರಯೋಗಗಳನ್ನು ನೋಡಿದರೆ ಆ ಭಾಷೆಗೆ ಇದ್ದ ಸ್ಥಾನವನ್ನು ಸೂಚಿಸುತ್ತದೆ.

ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಈ ಕಂದಾಯ ಪದ್ಧತಿಯು ಮುದ್ಯಯುಗದವರೆಗೂ ಮುಂದುವರೆದು ಬ್ರೀಟಿಷ ಆಡಳಿತೆಯಲ್ಲಿ ಒಂದು ನಿರ್ದಿಷ್ಟ ರೂಪ ತಳೆದು ವ್ಯವಸ್ಥಿತಗೊಂಡಿತ್ತೆಂದು ಅದನ್ನು ಈ ದೇಸಗತಿಗಳು ಮುಂದುವರೆಸಿಕೊಂಡು ಬಂದವೆಂದು ಹೇಳಬಹುದು.

ತಾವು ಪಡೆದ ಕಂದಾಯವನ್ನು ಮೂರು ಬಾಗ ದೇಸಾಯಿಯವರು ಒಂದು ಭಾಗ ಆದಿಲ್ ಶಾಹಿಗೆ ಕಂದಾಯ ಸಲ್ಲಿಸುತ್ತಿದ್ದರು. ಇವರ ಕಂದಯದ ಇನ್ನೋಂದು ಮೂಲವೆಂದರೆ ಮೀನುಗಾರಿಕೆ, ನದಿ ದಾಟುವ ದೋಣಿ ಗುಡ್ಡುಗಳಿಂದ ಇವುಗಳನ್ನು ಸವಾಲು ಮಾಡಿ ಯಾರು ಹೆಚ್ಚು ಕಂದಾಯ ಕೊಡಲು ಮುಂದೆ ಬರುತ್ತಿದ್ದರೋ ಅವರಿಗೆ ಆ ಹಕ್ಕನ್ನು ಕೊಡುತ್ತಿದ್ದರು.(೩) ಹಾಗೂ ಕಂದಾಯ ವಸೂಲಿಯನ್ನು ಲೀಲಾವ ಮಾಡುತ್ತಿದ್ದರು. ಈ ಲೀಲಾವಿನಲ್ಲಿ ಹೆಚ್ಚು ಬೇಡಿದವರಿಗೆ ಕಂದಾಯದ ಹಕ್ಕನ್ನು ಕೊಡುತ್ತಿದ್ದರು. ಇನ್ನು ಕೆಲವೊಂದು ತಾವೇ ತಮ್ಮ ಸ್ವಂತ ಹೊಲವನ್ನು ಸಮಪಾಲವನ್ನಾಗಿ ಕೊಡುತ್ತಿದ್ದರು.

## ನ್ಯಾಯಾಡಳಿತ

ನ್ಯಾಯಾಡಳಿತವು ಕೂಡಾ ದೇಸಾಯಿಯವರ ಕಾಲದೊಳಗೆ ಸುಸಂಭಂಧವಾಗಿಯೇ ಅಸ್ತಿತ್ವದಲ್ಲಿತ್ತೇಂಬುದನ್ನು ಅರಿಯಬಹುದು. ಬ್ರಿಟೀಷ ಪೂರ್ವದಲ್ಲಿ ಈ ದೇಸಾಯಿಗಳೇ ನ್ಯಾಯ, ಕಂದಾಯ, ನಾಗರಿಕ, ಆಡಳಿತ ನಡೆಸುತ್ತಿದ್ದರೆಂಬುದು ವಿಶೇಷ, ತಮ್ಮ ಪರಗಣದ ವ್ಯಾಪ್ತಿಯ ನ್ಯಾಯಾಡಳಿತ ಇವರಿಗೆ ಸೇರಿದ್ದು ಗ್ರಾಮಗಳಲ್ಲಿ ಗೌಡನು ನ್ಯಾಯ ನೀಡುತ್ತಿದ್ದನು. ಅಂತೀಮ ಮನವಿಯನ್ನು ಸುಲ್ತಾನನಿಗೆ ಸಲ್ಲಿಸಲಾಗುತ್ತಿತ್ತು. ದೇಸಗತಿ ವ್ಯಾಪ್ತಿಯಲ್ಲಿ ದೇಸಾಯಿಗೆ ಸಂಪೂರ್ಣ ನ್ಯಾಯ

ನಿರ್ಣಯ ಅಧಿಕಾರವಿದ್ದಿತ್ತು. ದೇಸಾಯಿಯು ಸ್ವತಂತ್ರನಾಗಿದ್ದರೂ ಅರಸನ ಸಾಮಂತನಾಗಿರಬೇಕಾಗಿತ್ತೆಂದು ದಾಖಲೆಗಳಿಂದ ತಿಳಿದುಬರುತ್ತದೆ. ಹನಗಂಡಿ ದೇಸಾಯಿಗಳ ಅವಧಿಯಲ್ಲಿ ಅಂತಿಮ ಮನವಿಯನ್ನು ಮೊದಲು ಆದಿಲ್ ಷಾಹಿಗಳ ಕಾಲದಲ್ಲಿ ಆದಿಲ್ ಷಾಹಿಗೂ ಮುಂದೆ ಸಾಂಗಲಿ ಪಟವರ್ಧನರಿಗೂ ಅರ್ಪಿಸುತ್ತಿದ್ದರೆಂದು ತೋರುತ್ತದೆ. ಕಾರಣವೆಂದರೆ ಇವರು ಸಾಂಗಲಿ ಸಂಸ್ಥಾನಕ್ಕೆ ನಿಷ್ಠ ಅಧಿಕಾರಿಗಳಾಗಿದ್ದರು. ಊರ ಹಿರಿಯರು ಪಂಚಾಯತಿಯಲ್ಲಿಯೇ ಗೌಡನು ನ್ಯಾಯ ತಿರ್ಮಾನ ಮಾಡುವ ಪದ್ಧತಿ ಇದ್ದಿತು.

ಈ ಪೂರ್ವದಲ್ಲಿ ಜಮೀನುದಾರರೆ ಆಯಾ ಪ್ರದೇಶಗಳ ನ್ಯಾಯಾಡಳಿತವನ್ನು ನೋಡಿಕೊಂಡು ಪ್ರಕರಣಗಳನ್ನು ಇತ್ಯರ್ಥಪಡಿಸುತ್ತಿದ್ದರು. ಮುಂದೆ ಬ್ರಿಟೀಷ ಗವರ್ನರ್ ಜನರಲ್‌ರು ಜಮೀನ್ದಾರರ ಈ ಅಧಿಕಾರವನ್ನು ಮೊಟಕುಗೊಳಿಸಲಾಯಿತಲ್ಲದೇ ಅದಕ್ಕೆಂದೆ ಪ್ರತ್ಯೇಕ ಅಧಿಕಾರಿಗಳನ್ನು ಸಿವಿಲ್ ಹಾಗೂ ಕ್ರಿಮಿನಲ್ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಬಾಂಬೆ ಪ್ರಾಂತ್ಯಕ್ಕೆ ಸೇರಿದ ಕರ್ನಾಟಕದಲ್ಲಿ ಪ್ರತಿ ತಾಲೂಕುಗಳಿಗೆ ಒಬ್ಬೊಬ್ಬ ಮಾಮಲೆದಾರ ಎಂಬ ಅಧಿಕಾರಿಯನ್ನು ನೇಮಿಸಲಾಗಿತ್ತು. ಇವರಿಗೆ ಸಹಾಯಕರಾಗಿ ಎರಡು ಮೂರು ಅಧಿಕಾರಿಗಳನ್ನು ಅವರಿಗೆ ಕಿಲ್ಲೆದಾರರೆಂದು ನೇಮಿಸಲಾಗಿತ್ತು. ತಾಲೂಕಿನಾದ್ಯಂತ ಕಾರ್ಯನಿರ್ವಹಣೆಗಾಗಿ ಮುಲಕಿ ಪೌಜುದಾರ ಪೋಲಿಸ ಅಧಿಕಾರಿಗಳನ್ನು ನೇಮಕ ಮಾಡಲಾಗಿತ್ತು. ಚಿಕ್ಕ ಪುಟ್ಟ ಪ್ರಕರಣಗಳನ್ನು ಗ್ರಾಮದ ಗೌಡ, ಶ್ಯಾನುಭೋಗರು ವಿಚಾರಣೆ ಮಾಡುತ್ತಿದ್ದರು. ಪ್ರಕರಣಗಳು ಮಾಮ್ಲೆದಾರರಿಗೆ ಬಂದರೆ ಆತನ ಸಹಚರ ನೆರವಿನಿಂದ ನ್ಯಾಯ ತಿರ್ಮ ನೀಡುತ್ತಿದ್ದರು. ಈ ರೀತಿಯಾಗಿ ನ್ಯಾಯಾಡಳಿತತೆಯು ವ್ಯವಸ್ಥಿತಗೊಂಡಿತ್ತೆಂದು ಹೇಳಬಹುದು.

ಹನಗಂಡಿ ದೇಸಾಯಿಗಳು ಈ ಮಾದರಿಯ ನ್ಯಾಯ ವ್ಯವಸ್ತೆ ಹೊಂದಿದ್ದಾರೆಂದು ತಿಳಿದು ಬರುತ್ತದೆ. ದೇಸಾಯಿಯವರು ನ್ಯಾಯ ನಿಷ್ಟರಾಗಿದ್ದರೂ, ಯಾವುದೇ ಮುಲಾಜಿಲ್ಲದೇ ಪಂಚಾಯತಿಯ ತೀರ್ಮ ನೀಡುತ್ತಿದ್ದರೆಂದು ತಿಳಿದು ಬರುವದು. ಈ ಅವಧಿಯಲ್ಲಿ ಶಿಕ್ಷೆಯಲ್ಲಿ ಅಷ್ಟೊಂದು ಕಠಿಣವಾಗಿರಲಿಲ್ಲವೆಂದು ಹೇಳಬಹುದು ಘೋರ ಅಪರಾಧಕ್ಕೆ ಗಡಿಪಾರು ಮಾಡುವ ಶಿಕ್ಷೆಯಿದ್ದಿತು. ಪಂಚಾಯತಿಯ ಕಟ್ಟೆಯ ಮುಂದೆ ಚಾಟಿ ಏಟಿನಿಂದ ನಿರ್ದಿಷ್ಟಪಡಿಸಿರುವಷ್ಟು ಸಲ ಬಡಿಯುವುದು, ಸಾಮಾಜಿಕ ಬಹಿಷ್ಕಾರ ಹಾಕುವುದು ಮೊದಲಾದವುಗಳು ಶಿಕ್ಷೆಯ ಪ್ರಕಾರಗಳಾಗಿದ್ದವು. ಬ್ರಿಟಿಷ ಆಡಳಿತೆಯಲ್ಲಿ ಶಿಕ್ಷೆಗಳು ಕಠಿಣ ರೂಪ ತಳೆದಿದ್ದನ್ನು ಕಾಣಬಹುದು. ಈ ಮೊದಲು ಹನಗಮಡಿಯ

ವಾಡೆಯಲ್ಲಿಯೇ ನ್ಯಾಯದಾನ ನಡೆಯುತ್ತಿತ್ತು. ಈ ವಾಡೆಯಲ್ಲಿಯೇ ಜೈಲು ಇತ್ತು. ಈ ಜೈಲಿನಲ್ಲಿ ಕೈದಿಗಳನ್ನು ಮೂರು ತಿಂಗಳವರೆಗೆ ಮಾತ್ರ ಇಟ್ಟುಕೊಳ್ಳುತ್ತಿದ್ದರು. ನಂತರ ಬಿಜಾಪೂರದ ಆದಿಲ್‌ಷಾನ ಹತ್ತಿರ ದೊಡ್ಡ ಜೈಲುಗಳಿಗೆ ಕಳುಹಿಸಲಾಗುತ್ತಿತ್ತು. ಕಳವು, ವ್ಯಭಿಚಾರ ಮುಂತಾದವುಗಳಿಗೆ ವಾಡೆಯಲ್ಲಿರುವ ಜೈಲಿನಲ್ಲಿ ಒಂದು ತಿಂಗಳು ಅಪರಾಧಿಯನ್ನು ಇಟ್ಟುಕೊಂಡು ಮುಂದೆ ಆದಿಲ್‌ಷಾನ ಕಡೆಗೆ ಕಳುಹಿಸಲಾಗುತ್ತಿತ್ತು.

### ಸೈನ್ಯ

ಆರಂಭದಲ್ಲಿ ಈ ದೇಸಗತಿಗಳು ಚಿಕ್ಕ ಪುಟ್ಟ ಸೈನಿಕ ತುಕಡಿಯನ್ನು ಹೊಂದಿದ್ದವೆಂಬುದು ಸ್ಪಷ್ಟವಾಗುತ್ತದೆ. ಸರಗಣಾ ವತನದ ಮಾಲಿಕರಾಗಿದ್ದ ಈ ದೇಸಾಯಿಗಳಲ್ಲಿ ಚಿಕ್ಕ ಸೈನಿಕ ಪಡೆಯಿದ್ದು ಸೈನ್ಯದಲ್ಲಿ ಕೃಷಿಕರು, ಕೂಲಿಗಾರರ ನಿರುದ್ಯೋಗಿಗಳನ್ನು ನೇಮಕ ಮಾಡಲಾಗುತ್ತಿತ್ತು. ಇದು ಕಾಯ್ದಿಟ್ಟ ಪಡೆಯಾಗಿರಲಿಲ್ಲ ಹೊರತಾಗಿ ಕಷ್ಟದ ಸಮಯದಲ್ಲಿ ಅಂದರೆ ಯುದ್ಧದ ಸಮಯದಲ್ಲಿ ಇಂತಹವರಿಂದ ಕೂಡಿದ ಸೈನ್ಯದ ತುಕಡಿಯನ್ನು ತಮ್ಮ ಒಡೆಯನಿಗೆ ಕಳುಹಿಸಿಕೊಡಲಾಗುತ್ತಿತ್ತು. ಈ ಸೈನಿಕರು ಅಷ್ಟೊಂದು ತರಬೇತಿ ಹೊಂದಿದವರಾಗಿರಲಿಲ್ಲವೆಂದು ಹೇಳಬಹುದು. ಏಕೆಂದರೆ ವರ್ಷವಿಡೀ ಕೃಷಿ ಕೂಲಿಯನ್ನು ಮಾಡಿಕೊಂಡಿರುವವರೂ ಆಗಿದ್ದರು. ಅವರಲ್ಲಿ ಕೆಲವರಂತು ಯುದ್ಧ ಕಲೆಯನ್ನು ಬಲ್ಲವರಾಗಿದ್ದರು. ದೇಸಾಯಿಗಳ ವಾಡೆಯಲ್ಲಿ ದೊರೆತ ಯುದ್ದ ಉಪಕರಣಗಳು ಗಮನಿಸಿದರೆ ಇವರಲ್ಲಿಯೂ ಸೈನ್ಯದ ತುಕಡಿ ಇತ್ತೆಂದು ತಿಳಿದು ಬರುತ್ತದೆ.

ಈ ಪೂರ್ವದಲ್ಲಿ ದೇಸಗತಿ ಉಗಮಕ್ಕೆ ಕಾರಣಗಳನ್ನು ವಿವರಿಸುವಾಗಲೇ ಮುಖ್ಯ ಉದ್ದೇಶದ ಕುರಿತು ಚರ್ಚಿಸಲಾಗಿದೆ. ಅಂದರೆ ಕಳ್ಳ ಕಾರರಿಂದ ತಮ್ಮ ಪ್ರದೇಶ, ಜಮೀನು, ಆಹಾರ ದಾನ್ಯಗಳನ್ನು ರಕ್ಷಣೆ ಮಾಡಿಕೊಳ್ಳುವ ಉದ್ದೇಶ ಈ ದೇಸಗತಿಗಳಿದ್ದಂತೆಯೇ. ಅವರೊಂದು ಚಿಕ್ಕ ಸೈನಿಕ ಪಡೆಯನ್ನು ಹೊಂದಿದ್ದರೆಂದು ತಿಳಿಯಬಹುದು ಬ್ರಿಟೀಷ ಭಾರತದಲ್ಲಿ ಈ ದೇಸಗತಿಗಳನ್ನು ಬ್ರಿಟೀಷರಿಗೆ ನಿಷ್ಠರಾಗಿದ್ದರಲ್ಲದೆ ಅವರ ವಿರುದ್ಧ ದಂಗೆಗಳೆದ್ದರೆ ಇಂತಹ ದೇಸಗತಿಗಳನ್ನು ಬಳಸಿಕೊಳ್ಳುತ್ತಿದ್ದರು. ದೇಸಾಯಿಗಳು ತಮ್ಮ ಅಂಗ ರಕ್ಷಣೆಗಾಗಿಯೂ ಮತ್ತು ಬೇಟೆಯಾಡುವುದಕ್ಕು ಈ ಅಸ್ತ್ರಗಳನ್ನು ಬಳಸುತ್ತಿದ್ದರು. ಈ ದೇಸಾಯಿಗಳ ವಾಡೆಯಲ್ಲಿ ದೊರೆತ ಅಂತಹ ಯುದ್ಧ ಆಯುಧಗಳೆಂದರೆ ಆರು ದೊಡ್ಡ ಖಡ್ಗಗಳು, ಎರಡು ತಲವಾರುಗಳು, ಈಟಿ, ದಂಡಗಳು ಹೀಗೆ ಯುದ್ಧ ಆಯುಧಗಳನ್ನು ನೋಡಿದರೆ ಇವರು ಸೈನಿಕ ತುಕಡಿಯನ್ನು ಹೊಂದಿದ್ದರೆಂದು ಹೇಳಬಹುದು. ಇವುಗಳನ್ನು ತಮ್ಮ

ಆತ್ಮ ರಕ್ಷಣೆಗಾಗಿ ಬಳಸಲಾಗುತ್ತಿತ್ತು. ಈ ದೇಸಾಯಿಯವರಿಗೆ ಅಂಗರಕ್ಷಕರು ಇದ್ದರು. ಇವರಲ್ಲಿ ೨೫ ಕುದುರೆಗಳು, ೨೦೦ ಹತಾರಗಳು, ೨೦೦ ಬಂದುಕುಗಳು ಇದ್ದವೆಂದು ಬ್ರಿಟಿಷರು ತಮ್ಮ ವಶಕ್ಕೆ ಇವುಗಳನ್ನು ತೆಗೆದುಕೊಂಡರು. ೧೦-೧೨ ಹತಾರಗಳು ಮಾತ್ರ ಇವೆ. ಇವರ ವಾಡೆಯಲ್ಲಿಯೇ ಮದ್ದು ಗುಂಡುಗಳನ್ನು ತಯಾರಿಸುತ್ತಿದ್ದರು. ಕೋಟೆಯ ಗೋಡೆಗಳಿಗೆ ಮದ್ದು ಹಾಕಿ ಹಾರಿಸುವ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಮದ್ದುಗಳನ್ನು ಇಲ್ಲಿ ತಯಾರಿಸಲು ಪ್ರಮುಖ ಕಾರಣವೆಂದರೆ ಅದರ ಕಚ್ಚಾ ಸಾಮಾಗ್ರಿಗಳಾದ ಗಂಧಕ, ಇನ್ನಿತರ ವಸ್ತುಗಳು ಇಲ್ಲಿ ಹೆಚ್ಚಾಗಿ ಸಿಗುತ್ತವೆಂದು ತಿಳಿಯಬಹುದಾಗಿದೆ.

ಹೀಗೆ ಈ ದೇಸಗತಿಗಳ ಆಡಳಿತ ವ್ಯವಸ್ಥೆಯು ಅತ್ಯಂತ ವ್ಯವಸ್ಥಿತವಾಗಿತ್ತೆಂದು ಅರಿಯಬಹುದು. ಬ್ರಿಟೀಷ ಆಡಳಿತ ವ್ಯವಸ್ಥೆಯಲ್ಲಿ ನಮ್ಮ ಸಾಂಪ್ರದಾಯಿಕ ಆಡಳಿತವು ಸಂಘಟನೆಯಾಗಿತ್ತಲ್ಲದೆ, ಕಂಪನಿಯಿಂದ ವಾರ್ಷಿಕ ಭತ್ಯೆಯನ್ನು ಪಡೆದು ಎಲ್ಲ ಅಧಿಕಾರವನ್ನು ಬ್ರಿಟೀಷರೇ ನಿರ್ವಹಿಸಲಾರಂಭಿಸಿದರು.

## ೪ ಶೈಕ್ಷಣಿಕ ಸುಧಾರಣೆಗಳು

ಹನಗಂಡಿ ದೇಸಾಯಿಗಳು ತಮ್ಮ ಆಧೀನದಲ್ಲಿನ ಪ್ರದೇಶಗಳಲ್ಲಿ ಶೈಕ್ಷಣಿಕ ಪ್ರಗತಿಗೂ ಪರಿಶ್ರಮಿಸಿದರು. ಉನ್ನತ ಶಿಕ್ಷಣ ಪಡೆದ ಇವರು ಶೈಕ್ಷಣಿಕ ಕೊರತೆಗಳನ್ನು ಅರಿತುಕೊಂಡು ಶಾಲೆಗಳ ನಿರ್ಮಾಣಕ್ಕೆ ಮುಂದಾದರಾದರು ಇವರು ಹೆಚ್ಚಾಗಿ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಷ್ಟೊಂದು ಆಸಕ್ತಿ ತಾಳಿರಲಿಲ್ಲವೆಂದು ತಿಳಿದುಬರುತ್ತದೆ. ಇವರ ದೇಸಗತಿಯ ೩೩ ಹಳ್ಳಿಗಳಲ್ಲಿ ಶಾಲಾ ಕಾಲೇಜುಗಳು ಇಲ್ಲದೆ ಹೊದದ್ದು ತೇರದಾಳ, ಮೂಡಲಗಿ ಹಾಗೂ ರಬಕವಿಗಳು ಪಟ್ಟಣಗಳಿದ್ದರೂ, ಇವರ ಅವಧಿಯಲ್ಲಿ ಶೈಕ್ಷಣಿಕ ರಂಗದಲ್ಲಿ ಅಷ್ಟೊಂದು ಆಸಕ್ತಿ ಹೊಂದಿರಲಿಲ್ಲ. ಇವರು ತಮ್ಮದೇ ಆದ ಶಿಕ್ಷಣ ಸಂಸ್ಥೆಗಳನ್ನು ಕೂಡಾ ನಿರ್ಮಾಣ ಮಾಡಿರಲಿಲ್ಲ. ಆದರೂ ಹಲವಾರು ಶಾಲಾ ಕಾಲೇಜುಗಳಿಗೆ ದಾನಗಳನ್ನು ನೀಡುತ್ತಿದ್ದರೆಂದು ತಿಳಿದುಬರುತ್ತದೆ.

ತೇರದಾಳದಲ್ಲಿರುವ ಸರಕಾರಿ ಪ್ರಾಥಮಿಕ ಶಾಲೆಗೆ ಜಮೀನವನ್ನು ದೇಣಿಗೆಯಾಗಿ ಕೊಟ್ಟಿದ್ದರು. ಸಾಕಷ್ಟು ದೀನ ದಲಿತರಿಗೆ, ಬಡವರಿಗೆ ಹಣಕಾಸಿನ ನೇರವನ್ನು ನೀಡಿರುವದನ್ನು ಬಿಟ್ಟರೆ ಮತ್ತಾವ ಶೈಕ್ಷಣಿಕ ರಂಗದಲ್ಲಿ ಸುಧಾರಣೆಗಳಿಲ್ಲ. ಕೆಲವು ಸಲ ಶಾಲೆಗೆ ಕಳುಹಿಸಲು ಅಸಮರ್ಥರಾದ ಪಾಲಕರ ಪರವಾಗಿ ತಾವೇ ಕೆಲವು ಸಮಯದಲ್ಲಿ ವಿದ್ಯಾರ್ಥಿಗಳ ಪ್ರವೇಶ ಶುಲ್ಕವನ್ನು ಭರಿಸುತ್ತಿದ್ದರು.

## ೫ ಧಾರ್ಮಿಕ ಆಚರಣೆಗಳು

ಪ್ರತಿ ಉತ್ತರ ಕರ್ನಾಟಕದ ದೇಸಗತಿ ಮನೆತನಗಳಲ್ಲಿ ವಿಶಿಷ್ಟವಾಗಿರುವ ಆಚರಣೆಗಳನ್ನು ಸಂಪ್ರದಾಯಗಳನ್ನು ಕಾಣುತ್ತೆವೆ. ಅದೇ ರೀತಿ ಹನಗಂಡಿ ದೇಸಗತಿಗಳು (ದೇಸಾಯಿಗಳು) ತಮ್ಮದೇ ಆದ ರೂಢಿಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಹಬ್ಬ – ಜಾತ್ರೆ – ಉತ್ಸವಗಳಲ್ಲಿ ದೇಸಾಯಿಗಳು ಸಾರ್ವಜನಿಕರೊಂದಿಗೆ ಬೆರೆತು, ಅವರ ನೋವು ನಲಿವುಗಳನ್ನು ಹಂಚಿಕೊಳ್ಳುತ್ತಿದ್ದರು.

ಹನಗಂಡಿ ದೇಸಾಯಿಗಳು ಜೈನರಾಗಿದ್ದರೂ, ಇವರದು ಉತ್ತರ ಕರ್ನಾಟಕದ ದೇಸಗತಿಗಳಲ್ಲಿ ಜೈನ ದೇಸಗತಿ ಮೊದಲನೆಯ ಮನೆತನದಾಗಿದೆ. ಇವರು ಜೈನರಾಗಿದ್ದರೂ ಸರ್ವಧರ್ಮಗಳ ಆಚರಣೆಯನ್ನು ಪ್ರೇರೇಪಿಸುತ್ತಿದ್ದರಲ್ಲದೆ ಅದು ದೇಸಾಯಿಗಳಿಗೆ ಅತ್ಯವಶ್ಯಕವಾಗಿತ್ತು. 

ಕಾರ ಹುಣ್ಣಿಮೆ, ದೀಪಾವಳಿ, ಗಣೇಶ ಚತುರ್ಥಿ ಹಾಗೂ ವಿಜಯದಶಮಿ ಹಬ್ಬಗಳನ್ನು ವಿಜ್ರಂಭಣೆಯಿಂದ ಆಚರಿಸುತ್ತಿದ್ದರು. ಹನಗಂಡಿ ದೇಸಾಯಿಯವರ ಆರಾಧ್ಯ ದೈವ ತೇರದಾಳ ಅಲ್ಲಮಪ್ರಭು ದೇವರು ಇವರ ಆರಾದ್ಯ ದೈವವಾಗಿತ್ತು. ಅಲ್ಲಮಪ್ರಭು ದೇವರ ಜಾತ್ರೆ ಪ್ರತಿವರ್ಷ ಇವರ ಮುಖಂಡತ್ವದಲ್ಲಿ ಇವತ್ತಿನವರೆಗೂ ವಿಜ್ರಂಭಣೆಯಿಂದ ನಡೆಯುತ್ತದೆ. ಅಲ್ಲಮಪ್ರಭು ದೇವರ ಜಾತ್ರೆ ಪ್ರತಿ ವರ್ಷವು ಶ್ರಾವಣ ತಿಂಗಳ ಕೊನೆಯ ಸೋಮವಾರ ನೆರವೇರುತ್ತಿದ್ದು, ದೇಸಾಯಿಯವರು ಕೃಷ್ಣಾ ನದಿಯಿಂದ ಸ್ನಾನ ಮಾಡಿಕೊಂಡು ಅಲ್ಲಮಪ್ರಭು ದೇವಸ್ಥಾನಕ್ಕೆ ಬೆಳಗಿನ ಜಾವ ಕೃಷ್ಣಾ ನದಿಯ ಜಲವನ್ನು ತಂದು ಜಲಾಭಿಷೇಕವನ್ನು ಮಾಡಿಸಿ ಪೂಜೆ ನೆರವೆರಿಸುತ್ತಿದ್ದರು. ಅವರು ಬರುವವರೆಗೂ ಈ ಕಾರ್ಯಕ್ರಮ ನೆರವೇರಿಸುವಂತಿರಲಿಲ್ಲ. ಪ್ರತಿ ಸೋಮವಾರ ತಪ್ಪದೆ ನಾಗರಿಕರೆಲ್ಲರೂ ಸೇರಿ ಪಲ್ಲಕ್ಕಿ ಉತ್ಸವದೊಂದಿಗೆ ದೇವರ ಸೇವೆ ಮಾಡುತ್ತಾರೆ. ಹಾಗೂ ದೇವರ ಮುಂದೆ ಅರಿವೆಯನ್ನು (ಪರದೆ) ಹಾಕಿರುತ್ತಿದ್ದರು. ಆ ಅರಿವೆಯನ್ನು ದೇಸಾಯಿಯವರು ಬಂದ ನಂತರ ತೆಗೆಯುತ್ತಿದ್ದರು. ಇನ್ನೊಂದು ವೈಶಿಷ್ಟ್ಯವೆಂದರೆ, ಶ್ರಾವಣ ಕಡೆಯ ಸೋಮವಾರ ಎಂದರೆ ಬಸವಣ್ಣನಿಗೆ (ಎತ್ತುಗಳಿಗೆ) ಪ್ರತಿ ವಾರವು ರಜೆ ಅಂದರೆ ಬಂಡೆಗಳನ್ನು ಹೂಡುವದಿಲ್ಲ, ಹೀಗಾಗಿ ಕಡೆಯ ಸೋಮವಾರ ಮೇಣದಲ್ಲಿ (ಪಲ್ಲಕ್ಕಿ) ದೇಸಾಯಿ ಮನೆಯವರ ಸ್ತ್ರೀಯರನ್ನು ಕೂಡಿಸಿಕೊಂಡು ದೇವಾಲಯದವರೆಗೂ ಹೆಗಲ ಮೇಲೆ ಹೊತ್ತಿಕೊಂಡು ಹೋಗುತ್ತಿದ್ದರು. ಹೊತ್ತಿಕೊಂಡು ಹೊಗಲಿಕ್ಕೆ "ಬಯ್ಯಾರ"ರನ್ನು ನೇಮಿಸಿದ್ದರು ಬಯ್ಯಾರರ ಉಪಜೀವನಕ್ಕೆ ಪ್ರತಿಯೊಬ್ಬರಿಗೂ ೫ ರಿಂದ ೬ ಎಕರೆ ಜಮೀನವನ್ನು ನೀಡಿದ್ದರು. ಇವರ ಜೊತೆಗೆ

ಹಳಬರು, ಕೊಂಬಸಿಂಗೆ, ಕೈಪಟ್ಟುಗಳು ಮುಂತಾದವರು ಹನಗಂಡಿಯಿಂದ ತೇರದಾಳದವರೆಗೂ ಸಾಗಿ ಬಂದು ಅಲ್ಲಮಪ್ರಭುವಿನ ದರ್ಶನ ಪಡೆದುಕೊಂಡು ನಂತರ ಸಾರ್ವಜನಿಕರಿಗೆ ದರ್ಶನಕ್ಕೆ ಅವಕಾಶ ಮಾಡಿಕೊಡುತ್ತಿದ್ದರು.

ಅದೇ ರೀತಿ ಕಾರ ಹುಣ್ಣಿಮೆಯು ಕೂಡಾ ವಿಶೇಷವಾಗಿ ಆಚರಿಸುವ ಪದ್ಧತಿ ಈ ದೇಸಗತಿಯಲ್ಲಿತ್ತು. ಕಾರಹುಣ್ಣಿಮೆಯಂದು ಎರಡೂ ಎತ್ತುಗಳನ್ನು ಕರಿಹರಿಯುತ್ತಿದ್ದರೂ. ಈ ಕರಿಹರಿಯುವದಕ್ಕಿಂತ ಮುಂಚೆ ದೇಸಾಯಿಯವರದು ಒಂದು ಎತ್ತು ಇನ್ನೊಂದು ಊರ ಗೌಡರ ಒಂದು ಎತ್ತು ಇವುಗಳನ್ನು ಮೊದಲು ಪೂಜಿಸುತ್ತಿದ್ದರು ಹಾಗೂ ಎತ್ತುಗಳನ್ನು ಶೃಂಗರಿಸುತ್ತಿದ್ದರು. ಈ ಎರಡೂ ಎತ್ತುಗಳಲ್ಲಿ ಒಂದು ಕೆಂಪು ಇನ್ನೊಂದು ಬಿಳಿಯ ಎತ್ತುಗಳೆಂಬ ನಿಯಮವಿತ್ತು, ಕೆಂಪು ಎತ್ತು ದೇಸಾಯಿಯವರದು ಇನ್ನೊಂದು ಬಿಳಿ ಎತ್ತು ಗೌಡರದು ಎರಡನ್ನೂ ಕೂಡಿ ಊರಿನ ಪ್ರಮುಖರೆಲ್ಲರು ಕೂಡಿ ಎರಡು ಎತ್ತುಗಳನ್ನು ಕರಿಹರಿಯುತ್ತಿದ್ದರು ಕೆಂಪು ಎತ್ತು ಮುಂದೆ ಬಂದರೆ ಗೋದಿ ಈ ವರ್ಷ ಹುಲುಸಾಗಿ (ಹೆಚ್ಚಾಗಿ) ಬೆಳೆಯುತ್ತದೆ. ಬಿಳಿ ಎತ್ತು ಮುಂದೆ ಬಂದರೆ ಬಿಳಿ ಜೋಳ ಹುಲುಸಾಗಿ ಬರುತ್ತದೆ. ಎಂಬುದು ಈಗಲೂ ಈ ಪದ್ದತಿ ಉತ್ತರ ಕರ್ನಾಟಕದ ತುಂಬೆಲ್ಲಾ ಕಂಡು ಬರುತ್ತದೆ.

ವಿಜಯದಶಮಿ (ನವರಾತ್ರಿ) ಹಬ್ಬವನ್ನು ಒಂಬತ್ತು ದಿನಗಳವರೆಗೆ ಅತಿ ವಿಜೃಂಭಣೆಯಿಂದ ವಾಡೆಯಲ್ಲಿ ಆಚರಿಸುತ್ತಿದ್ದರು. ಒಂಬತ್ತು ದಿನಗಳ ಕಾಲ ಪ್ರತಿದಿನವು ಪೂಜಾ ಕಾರ್ಯಕ್ರಮಗಳನ್ನು ಜರುಗಿಸುತ್ತಿದ್ದರು, ಹಾಗೂ ಒಂಬತ್ತು ದಿನಗಳವರೆಗೆ ದೀಪವನ್ನು ಉರಿಸುತ್ತಿದ್ದರು ಅವು ಆರದ ಹಾಗೆ ನೋಡಿಕೊಳ್ಳುತ್ತಿದ್ದರು. ಒಂಬತ್ತನೇ ದಿನದಂದು ಪಲ್ಲಕ್ಕಿ ಉತ್ಸವದೊಂದಿಗೆ ಬನ್ನಿ ಮಂಟಪಕ್ಕೆ (ಚಿತ್ರ ಸಂಖ್ಯೆ –೬) ಹೋಗಿ ಬನ್ನಿಗಿಡವನ್ನು ಪೂಜಿಸಿ ಬನ್ನಿ ಮುರಿಯುತ್ತಿದ್ದರು. ಈ ರೀತಿ ಒಂಬತ್ತು ದಿನಗಳವರೆಗೆ ವಿಜಯದಶಮಿ ಹಬ್ಬವನ್ನು ದೇಸಾಯಿಯವರ ಮುಖಂಡತ್ವದಲ್ಲಿ ಆಚರಿಸುತ್ತಿದ್ದರು.

ದೀಪಾವಳಿ ಹಬ್ಬ ಅತೀ ಪ್ರಾಚೀನ ಕಾಲದಿಂದಲೂ ಹಿಡಿದು ಇವತ್ತಿನವರೆಗೂ ಈ ಹಬ್ಬಕ್ಕೆ ವಿಶೇಷ ಸ್ಥಾನವಿದ್ದು ಈಗಲೂ ಈ ಪದ್ದತಿ ಮುಂದುವರೆದಿದೆ. ದೀಪಾವಳಿ ಹಬ್ಬವನ್ನು ದೇಸಾಯಿಗಳು ವಿಜೃಂಬಣೆಯಿಂದ ಆಚರಿಸುತ್ತಿದ್ದರು ದೇಸಾಯಿ ಮನೆತನದ ಹೆಣ್ಣು ಮಕ್ಕಳು ವಿವಿಧ ರೀತಿಯ ಆಭರಣಗಳನ್ನು ತೊಟ್ಟು ತೋಳುಗಳಲ್ಲಿ ತೋಳದಿಂಬ ಎಂಬ ಬಂಗಾರದ ಆಭರಣಗಳನ್ನು ಕಾಲಲ್ಲಿ ಬಂಗಾರದ ಕಡಗಗಳನ್ನು ಹಾಕಿಕೊಳ್ಳುತ್ತಿದ್ದರು. ಸಹೋದರಿಯರು ಸಹೋದರನಿಗೆ ಆರತಿ ಬೆಳಗುತ್ತಿದ್ದರು.

ಆರತಿಯಲ್ಲಿ ಸಹೋದರನು ಹಣವನ್ನಾಗಲಿ ಇಲ್ಲವೆ ಬಂಗಾರವನ್ನಾಗಲಿ ಹಾಕುತ್ತಿದ್ದರು. ಸಹೋದರಿಯರು ತಮ್ಮ ತವರುಮನೆ ಸುಖ ಸಮೃದ್ಧಿಯಿಂದ ಕೂಡಿ ಹಬ್ಬಲಿ ನಮ್ಮ ತವರು ಬಳ್ಳಿ ಎಂದು ಹಾಡಿ ಹರಿಸುತ್ತಿದ್ದರು. ಇದರೊಂದಿಗೆ ಸೊಂಟ ಪಟ್ಟಿಗೆ ತಲವಾರವನ್ನು ಅಂದರೆ ಕತ್ತಿಯನ್ನು ಬಿಗಿದುಕೊಂಡು (ಧರಸಿ) ಅಕ್ಕ ಅಥವಾ ತಂಗಿಯನ್ನು ಗಂಡನ ಮನೆಗೆ ಮೊದಲ ಬಾರಿಗೆ ಕಳಿಸಿ ಬರುವ ಪದ್ಧತಿ ಇತ್ತು. ಈಗಲೂ ಮುಂದುವರೆದುಕೊಂಡು ಬಂದಿದೆ. ಇದರ ಹಿನ್ನಲೆ ಎಂದರೆ ತಂಗಿ ಅಥವಾ ಅಕ್ಕಳಿಗೆ ಕೊನೆಯವರೆಗೂ ತನ್ನ ಅಭಯವನ್ನು ಕೊಡುವುದೇ ಆಗಿತ್ತು. ಒಂದು ವಿಶೇಷವೆಂದರೆ, ಈ ಮನೆತನದಲ್ಲಿಯ ಮದುವೆ ಸಮಾರಂಭಗಳಲ್ಲಿ ಸಿಪಾಯಿಗಳು ವೇಷದಾರಿಗಳಾಗಿ ಖಡ್ಗ ಹಿಡಿದುಕೊಂಡು ದೇಸಾಯಿಗಳ ಹಿಂದೆ ನಿಲ್ಲುವುದು ವಾಡಿಕೆ.

ಅದರಂತೆ ಗಣೇಶ ಉತ್ಸವವನ್ನು ಈ ದೇಸಾಯಿಯವರು ಆಚರಿಸುತ್ತಿದ್ದರು. ಗಣೇಶ ಹಬ್ಬವನ್ನು ಐದು ದಿನಗಳ ಕಾಲ ಆಚರಿಸುವ ಪದ್ಧತಿ ಕಂಡು ಬರುತ್ತದೆ. ದೇಸಾಯಿಯವರು ಗಣೇಶ ಹಬ್ಬಕ್ಕಾಗಿಯೇ ಒಂದು ಪ್ರತ್ಯೇಕ ಪಲ್ಲಕ್ಕಿ ಮಾಡಿಸಿರುವರು (ಚಿತ್ರ ಸಂಖ್ಯೆ-೬) ಈ ಪಲ್ಲಕ್ಕಿಯಲ್ಲಿ ಗಣೇಶನನ್ನು ತಂದು ವಾಡೆಯಲ್ಲಿ ಇಟ್ಟುಕೊಂಡು ಪ್ರತಿ ದಿನ ಮನರಂಜನಾ ಕಾರ್ಯಕ್ರಮಗಳನ್ನು ಹಾಕಿಕೊಂಡು ವಿಶಿಷ್ಟವಾಗಿ ಆಚರಿಸುತ್ತಿದ್ದರು. ಐದನೇಯ ದಿನ ವಿಶೇಷ ಕಾರ್ಯಕ್ರಮವನ್ನ ನೆರವೇರಿಸಿ, ಗಣೇಶನನ್ನು ವಿಸರ್ಜಣೆ ಮಾಡುತ್ತಿದ್ದರು.

ಹನಗಂಡಿ ದೇಸಾಯಿಗಳು ಈ ಮೊದಲು ಹೇಳಿದಂತೆ ಚತುರ್ಥ ಜೈನ (ದಿಗಂಬರ) ಪಂಗಡಕ್ಕೆ ಸೇರಿದವರಾಗಿದ್ದರು. ಆದ್ದರಿಂದ ಇವರು ಜೈನ ದರ್ಮಕ್ಕೆ ವಿಶೇಷವಾದ ಪ್ರೋತ್ಸಾಹ ಕೊಡುತ್ತಿದ್ದರು. ಅವರು ತಮ್ಮ ಧರ್ಮದ ಬೆಳವಣಿಗೆಗಾಗಿ ಹಲವಾರು ಜೈನ ಬಸದಿಗಳನ್ನು ಕಟ್ಟಿಸಿದರು, ಇವರು ವಿಶೇಷವಾಗಿ ಮಹಾವೀರ ಜಯಂತಿಯನ್ನು ಆಚರಿಸುತ್ತಿದ್ದರು, ಆ ಜಯಂತಿಯ ಸಂದರ್ಭದಲ್ಲಿ ಹಲವಾರು ಮನರಂಜನಾ ಕಾರ್ಯಕ್ರಮಗಳನ್ನು ಹಾಕಿಕೊಂಡಿರುತ್ತಿದ್ದರು. ಹಾಗೂ ದೇಸಾಯಿಗಳು ರಾಜರ ವೇಷ ಭೂಷಣಗಳನ್ನು ಹಾಕಿಕೊಂಡಿರುತ್ತಿದ್ದರು. ಬಡವರಿಗೆ, ದೀನ ದಲಿತರಿಗೆ ಸಹಾಯ ಮಾಡುತ್ತಿದ್ದರು. ಹನಗಂಡಿ ದೇಸಾಯಿಗಳು ಸರ್ವ ಧರ್ಮಗಳನ್ನು ಸಮಾನ ದೃಷ್ಟಿಯಿಂದ ನೋಡಿಕೊಳ್ಳುತ್ತಿದ್ದರು. ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನುಂಟು ಮಾಡಿದ್ದರು. ದೇಸಾಯಿಗಳು ಮೊಹರಂವನ್ನು ಆಚರಿಸುತ್ತಿದ್ದರು. ಇವರ ಮುಖಂಡತ್ವದಲ್ಲಿ ಇವತ್ತಿಗೂ ಹನಗಂಡಿಯಲ್ಲಿ ಮೊಹರಂ ಹಬ್ಬವನ್ನು ಆಚರಿಸುತ್ತಾರೆ. ಹನಗಂಡಿಯಲ್ಲಿ

ಮಸಿದಿಯನ್ನು ಕಟ್ಟಿಸಿಕೊಟ್ಟಿದ್ದಾರೆ. ಅದರ ನಿರ್ವಹಣೆಗಾಗಿ ಹತ್ತು ಎಕರೆ ಜಮೀನನ್ನು ಕೂಡಾ ಕೊಟ್ಟಿರುತ್ತಾರೆ. ಇನ್ನೊಂದು ಪ್ರಮುಖವಾದುದೆಂದರೆ, ತಾವು ಮುಸ್ಲಿಂ ಸಂತನಾದ ಜಿನಗೆ ಷಾ ನಿಂದ ದೇಸಗತಿಯನ್ನು ಸಂಪಾದಿಸಿದ್ದೇವೆ ಎಂದು ಜಿನಗೆ ಷಾ ದರ್ಗಾವನ್ನು ಹಾಗೂ ಅದರ ಮೇಲ್ವಿಚಾರಣೆಗಾಗಿ ೬೦ ಎಕರೆ ಜಮೀನವನ್ನು ಬಿಟ್ಟು ಕೊಟ್ಟಿರುತ್ತಾರೆ.

# ೬ ಕಲೆ ಮತ್ತು ವಾಸ್ತುಶಿಲ್ಪ

ಹನಗಂಡಿ ದೇಸಾಯಿಯವರು ತಮ್ಮ ಅದೀನದಲ್ಲಿ ಬರತಕ್ಕಂತಹ ಪ್ರದೇಶದಲ್ಲಿ ಹಲವಾರು ಸಾಧನೆಗಳನ್ನು ಮಾಡುವುದರ ಜೊತೆಗೆ ಕಲೆ ಮತ್ತು ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿರುತ್ತಾರೆ. ಇವರು ಹಲವಾರು ದೇವಾಲಯಗಳನ್ನು, ಜೈನ ಬಸದಿಗಳನ್ನು, ಮಸಿದಿಗಳನ್ನು ಕಟ್ಟಿಸಿರುತ್ತಾರೆ. ಇವರು ಅಲ್ಲಮ ಪ್ರಭುವಿನ ಪರಮ ಭಕ್ತರೂ ಆಗಿದ್ದರಿಂದ ತಮ್ಮ ವಾಡೆಯಲ್ಲಿಯೇ ಸುಂದರವಾದ ಭವ್ಯವಾದ ದೇವಾಲಯವನ್ನು ಕಟ್ಟಿಸಿರುತ್ತಾರೆ. (ಚಿತ್ರ ಸಂಖ್ಯೆ–೧೨) ತಾವು ತೇರದಾಳಕ್ಕೆ ಹೋಗಿ ಬರುವದು ಸಾದ್ಯವಾಗದೆ ಹೊದದ್ದರಿಂದ ಈ ದೇವಾಲಯವನ್ನು ವಾಡೆಯಲ್ಲಿಯೇ ಕಟ್ಟಿಸಿರುತ್ತಾರೆ. ದಿನಃಪ್ರತಿ ದೇವರ ದರ್ಶನ ಪಡೆಯದೇ ಅವರು ಎಲ್ಲಿಗೂ ಹೊಗುತ್ತಿರಲಿಲ್ಲ.

ತಮ್ಮ ವಿಶಾಲವಾದ ವಾಡೆಯಲ್ಲಿ ಜೈನ ಬಸದಿಯನ್ನು ಕಟ್ಟಿಸಿದ್ದಾರೆ. (ಚಿತ್ರ ಸಂಖ್ಯೆ–೭) ಬಸದಿಯು ಸುಂದರವಾಗಿದ್ದು ಗೋಪುರವನ್ನು ಕಟ್ಟಿಸಿದ್ದಾರೆ. ಈ ದೇವಾಲಯದ ಮುಂದೆ ಮಾನಸ್ತಂಭವನ್ನು (ಚಿತ್ರ ಸಂಖ್ಯೆ–೯) ಕಟ್ಟಿಸಿರುತ್ತಾರೆ.

ವಾಡೆಯಲ್ಲಿಯೇ ಮತ್ತೊಂದು ಮಂದಿರವನ್ನು ಕಟ್ಟಿಸಿರುತ್ತಾರೆ. ಅದುವೇ ಗಣಪತಿ ದೇವಾಲಯ. ಗಣೇಶ ಹಬ್ಬದಲ್ಲಿ ಈ ದೇವಾಲಯವನ್ನು ವೈಭವಿಕರಿಸಿರುತ್ತಾರೆ. ವಿದ್ಯುತ್ ದ್ವೀಪಗಳಿಂದ ಅಲಂಕಾರಗೊಳಿಸಿರುತ್ತಾರೆ. ಹೀಗೆ ಅವರು ಅರಮನೆಯಲ್ಲಿಯೇ ಅಲ್ಲಮ ಪ್ರಭುವಿನ ದೇವಾಲಯ, ಜೈನ ಬಸದಿ ಹಾಗೂ ಗಣಪತಿ ದೇವಾಲಯಗಳನ್ನು ಕಟ್ಟಿಸಿರುತ್ತಾರೆ.

ತೇರದಾಳದಲ್ಲಿ ದೇಸಾಯಿಗಳ ಮನೆತನದ ಗುರುಗಳಾದ ಜಿನಗೆ ಷಾನ ಮಸಿದಿಯನ್ನು (ದರ್ಗಾ) ಕಟ್ಟಿಸಿರುತ್ತಾರೆ. ಇವತ್ತಿಗೂ ಈ ದರ್ಗಾಕ್ಕೆ ಜಿನಗಿ ಬಾಬಾ ದರ್ಗಾ ಎಂದು ಕರೆಯುತ್ತಾರೆ. ಜಿನಗಿ ಬಾಬಾರ ಮಾತುಗಳು ಎಂದು ಸುಳ್ಳಾಗುತ್ತಿರಲಿಲ್ಲವೆಂದು ಹೇಳಲಾಗುತ್ತದೆ. ಈಗಲೂ ಈ ತಲೆಮಾರಿನ ದೇಸಾಯಿಗಳು ಜಿನಗಿ ಬಾಬಾ ದರ್ಗಾಕ್ಕೆ ಹೋಗಿ ಅವರ ಊರಸ್‌ವನ್ನು ನಡೆಸುತ್ತಾರೆ. ಹಾಗೂ ತೇರದಾಳದ ದೊಡ್ಡ ಬಸದಿಯನ್ನು ದೇಸಾಯಿಯವರ ದೇಸಗತಿಯ ಅವಧಿಯಲ್ಲಿ ಕಟ್ಟಿಸಿರುತ್ತಾರೆಂದು ತಿಳಿದು ಬರುತ್ತದೆ. ತೇರದಾಳದಲ್ಲಿ ಲಕ್ಕವ್ವ ದೇವಾಲಯವನ್ನು ಕಟ್ಟಿಸಿರುತ್ತಾರೆ.

ಇನ್ನೂ ತಮ್ಮ ಮೂಲ ನೆಲೆಯಾದ ಹನಗಂಡಿಯಲ್ಲಿ ದುರ್ಗಾ ದೇವಾಲಯ, ಲಕ್ಕವ್ವಾ ದೇವಾಲಯ, ಗುಮ್ಮಟ ದೇವಾಲಯ, ಹಟೇಲ್ ಬಾಷಾ ಮುಸ್ಲಿಂ ದೇವಾಲಯ ಮುಂತಾದ ಸುಮಾರು

೨೦ ಚಿಕ್ಕ ಪುಟ್ಟ ದೇವಾಲಯಗಳು ಈ ಹನಗಂಡಿಯಲ್ಲಿವೆ.

| | |
|---|---|
| ತೇರದಾಳ | ಹನಗಂಡಿ |
| ತಮದಡ್ಡಿ | ಹಳಿಂಗಳಿ |

ಯಲ್ಲಿರುವ ಬಸದಿಗಳ ಕಟ್ಟಡಗಳನ್ನು ಕಟ್ಟಿಸಿರುತ್ತಾರೆ. ಹಾಗೂ ಇವರು ಬಸದಿಗಳನ್ನು ಅರ್ಚಕರಿಗೆ ಒಪ್ಪಿಸುವುದು ಇವರ ಕೆಲಸವಾಗಿತ್ತು. ಆ ಬಸದಿಗಳ ಮೆಲ್ವಿಚಾರಣೆಯನ್ನು ದೇಸಾಯಿಗಳೇ ನೋಡಿಕೊಳ್ಳುತ್ತಿದ್ದರು. ಯಲ್ಲಾರಟ್ಟಿಯ ಅರಣ್ಯ ಸಿದ್ದೇಶ್ವರ ದೇವಾಲಯದ ಜಾತ್ರೆಗೆ ದೇಸಾಯಿಗಳೇ ಹೋಗಿ ಮುಂದೆ ನಿಂತು ಜಾತ್ರೆಯನ್ನು ಮುನ್ನೆಡೆಸುತ್ತಿದ್ದರು. ಹಂದಿಗುಂದದ ಹಾಲ ಸಿದ್ದೇಶ್ವರ ದೇವಾಲಯ, ಮೂಡಲಗಿಯ ಬ್ರಾಹ್ಮಣ ಮಠ ಮುಂತಾದ ದೇವಾಲಯಗಳು ಇವರಿಂದ ಕಟ್ಟಲ್ಪಟ್ಟಿದ್ದವು.

ಹನಗಂಡಿ ದೇಸಾಯಿಯವರು ಈ ಕೆಳಗಿನ ದೇವಾಲಯಗಳಿಗೆ ಅಪಾರ ದೇಣಿಗೆಯನ್ನು ನೀಡಿರುತ್ತಾರೆ.

| | |
|---|---|
| ೧. ತೇರದಾಳ ಬಸದಿಗೆ ಜಮೀನು | ೧೫೦ ಎಕರೆ. |
| ೨. ತಮದಡ್ಡಿ ದಿಗಂಬರೇಶ್ವರ ಬಸದಿಗೆ | ೬೦ ಎಕರೆ. |
| ೩. ಹಳಿಂಗಳಿ ಬಸದಿಗೆ | ೭೦ ಎಕೆರೆ. |
| ೪. ಹನಗಂಡಿ ಬಸದಿಗೆ | ೪೦ ಎಕರೆ. |
| ೫. ತೇರದಾಳ ಪ್ರಭುಸ್ವಾಮಿ ದೇವಾಲಯಕ್ಕೆ | ೨೦೦ ಎಕರೆ. |
| ೬. ಮೂಡಲಗಿ ಬ್ರಾಹ್ಮಣ ಮಠಕ್ಕೆ | ೧೦೦ ಎಕರೆ. |
| ೭. ಮದಲಮಟ್ಟಿ ಹನುಮಾನ ಮಂದಿರಕ್ಕೆ | ೫೦ ಎಕರೆ. |

ಮುಂತಾದ ದೇವಾಲಯಗಳಿಗೆ ಜಮೀನವನ್ನು ದಾನ ಮಾಡಿದರೆ, ಅಲ್ಲಮಪ್ರಭು ದೇವಾಲಯದ

೧. ಕಲಾವಂತರಿಗೆ

೨. ತಬಲಾವಾದಕರಿಗೆ

೩. ತಾಸೆ ಬಾರಿಸುವವರಿಗೂ

೪. ಕೊಂಬಸಿಂಗೆ

೫. ಬಯ್ಯಾರರಿಗೆ – ತಲಾ ೧೦ ಎಕರೆ ಭೂಮಿಯನ್ನು ನೀಡಿರುತ್ತಾರೆ.

ಇದಲ್ಲದೇ ಇನ್ನೂ ಹಲವಾರು ಕಟ್ಟಡಗಳಾದ ಅವರ ಕಲ್ಲಿನಿಂದ ಕಟ್ಟಲ್ಪಟ್ಟ ವಿಶಾಲವಾದ ವಾಡೆ (ಚಿತ್ರ ಸಂಖ್ಯೆ-೧), ತೇರದಾಳದಲ್ಲಿರುವ ತಹಶೀಲ್ದಾರರ ಕಛೇರಿ, ಪಂಚಾಯತ ಕಛೇರಿ, ತೇರದಾಳ ಊರ ಮಧ್ಯದಲ್ಲಿ ಇದ್ದ ಪೋಲೀಸ ಕಛೇರಿ ಕಟ್ಟಡಗಳು ಇವರ ದೇಸಗತಿಯ ಅವಧಿಯಲ್ಲಿ ಕಟ್ಟಲ್ಪಟ್ಟಿರುವಂತಹವುಗಳಾಗಿವೆ ಎಂದು ತಿಳಿದು ಬರುತ್ತದೆ.

**ಕಂಚು ಕಲೆ**

ಹನಗಂಡಿ ದೇಸಾಯಿಗಳು ಕಲೆ ಮತ್ತು ವಸ್ತುಶಿಲ್ಪಕ್ಕೆ ಕೊಟ್ಟ ಪ್ರೋತ್ಸಾಹವನ್ನು ಕಂಚು ತಯಾರಿಕೆಯಲ್ಲಿಯೂ ವಿಶೇಷ ಪ್ರೊತ್ಸಾಹ ಕೊಟ್ಟು ಪೋಷಿಸಿ ಬೆಳೆಸಿ ಇವತ್ತಿಗೂ ಉಳಿಸಿಕೊಂಡು ಬಂದಿದ್ದಾರೆ. ಬಾಗಲಕೋಟ ಜಿಲ್ಲೆ ಜಮಖಂಡಿ ತಾಲೂಕಿನ ಪುಟ್ಟ ಗ್ರಾಮ ಹನಗಂಡಿಯಲ್ಲಿ ಸುಮಾರು ೪೦೦ ವರ್ಷಗಳ ಇತಿಹಾಸ ಹೊಂದಿರುವ ದೇಸಾಯಿಯವರ ವಾಡೆಯಲ್ಲಿ ಗೌರಿಮನಿ ಹಾಗೂ ಲಾಳಕಿ ಎಂಬ ಅಡ್ಡ ಹೆಸರಿನ ೮-೧೦ ಮನೆಗಳಿವೆ. ಈ ಮನೆಯವರೂ ಆರಂಭದಿಂದಲೂ ಕಂಚಿನ ಮೂರ್ತಿ ತಯಾರಿಕೆಯನ್ನು ಮೂಲ ವೃತ್ತಿಯನ್ನಾಗಿಸಿಕೊಂಡು ಬಂದಿದ್ದಾರೆ. ಕಂಚು, ತಾಮ್ರ, ಹಿತ್ತಾಳೆ, ಬೆಳ್ಳಿ ಪಂಚಲೋಹಗಳಿಂದ ಆಕರ್ಷಕ ಮೂರ್ತಿ (ಚಿತ್ರ ಸಂಖ್ಯೆ-೧೪) ತಯಾರಿಸುವ ಇವರನ್ನು ಕಂಚುಗಾರರು ಎಂದು ರೂಢಿಯಿಂದ ಕರೆಯುತ್ತಾರೆ.

ಹನಗಂಡಿಯ ಕಂಚುಗಾರರು ತಯಾರಿಸಿದ ನಾನಾ ತೆರನಾದ ಮೂರ್ತಿಗಳನ್ನು, ಸಂಗೀತ ಸಾಧನಗಳನ್ನು ಕರ್ನಾಟಕ ಅಷ್ಟೇ ಅಲ್ಲ ಮಹಾರಾಷ್ಟ್ರ, ಆಂಧ್ರ ಪ್ರದೇಶ, ದಿಲ್ಲಿ, ಉತ್ತರ ಪ್ರದೇಶ ಭಾರತದ ಎಲ್ಲ ರಾಜ್ಯಗಳಿಗೂ ಮಾರಾಟ ಮಾಡಲು ಕಳುಹಿಸುತ್ತಿರುವದರಿಂದ ಹನಗಂಡಿಯ ಮೂರ್ತಿಗಳಿಗೆ ವಿಶೇಷ ಹೆಸರು ಬಂದಿದೆ.

ಮೂಲತಃ ದೇಸಾಯಿಯವರು ಈ ಕಂಚುಗಾರರಿಗೆ ವಿಶೇಷ ಸವಲತ್ತುಗಳನ್ನು ಕೊಟ್ಟು ಕಂಚು ಉದ್ದಿಮೆಯನ್ನು ಅಭಿವೃದ್ಧಿಗೊಳಿಸಿದರು. ನಮಗೆ ಸಿಕ್ಕ ಮಾಹಿತಿಗಳು ಅವ್ವಣ್ಣ ನಿಂಗಪ್ಪಾ ಗೌರಿಮನಿ ಇವರಿಂದ ಕಂಚಿನ ಮೂರ್ತಿಗಳನ್ನು ತಯಾರಿಸುವ ಕಲೆ ಆರಂಭಗೊಂಡಿತು ಇವರ ಮೂರನೇಯ ತಲೆಮಾರಿನವರಾದ ನಿಂಗಪ್ಪಾ ಗೌರಿಮನಿಯವರು ಖ್ಯಾತ ಕಂಚು ತಯಾರಕರಾಗಿ ಹೆಸರು ಮಾಡಿದ್ದಾರೆ. ಗೌರಿ ಹಾಗೂ ಕಾಳಿಕಾದೇವಿಯ ಆರಾಧಕರಾದ ಇವರು ಶ್ರದ್ಧಾ ಭಕ್ತಿಯಿಂದ ಮೂರ್ತಿ ತಯಾರಿಸುವುದು ಅವಶ್ಯವೆಂದು ನಂಬಿದವರು. ಗೌರಿ ಹುಣ್ಣಿಮೆಯಲ್ಲಿ ೧೫ ದಿನಗಳವರೆಗೆ ಗೌರಮ್ಮ ತಾಯಿ ಉತ್ಸವ ಜರುಗಿಸುತ್ತಾ ಬಂದಿರುವ ಇವರನ್ನು ಗೌರಿಮನಿ ಎಂದು ಕರೆಯುವದು ರೂಡಿಯಾಗಿದೆ.

ಬಾದಾಮಿ ಶ್ರೀ ಬನಶಂಕರಿ ಬೆಳ್ಳಿಯ ಉತ್ಸವ ಮೂರ್ತಿ, ಮುಚ್ಚಂಡಿ ಶ್ರೀ ಧರೆಪ್ಪ ಧರಿದೇವರ ೧೫ ಕೆ.ಜಿ. ಕುದುರೆ ಮೂರ್ತಿ, ಮುಧೋಳ ಶ್ರೀ ಬಸವೇಶ್ವರರ ೫೦ ಕೆ.ಜಿ. ಮೂರ್ತಿ, ಸಂಶಿಯ ಶ್ರೀ ಗುರುದೇವ ಬ್ರಹ್ಮಾನಂದ ಶಿವಯೋಗಿಗಳ ಆಶ್ರಮದಲ್ಲಿರುವ ೧೦೦ ಕೆ.ಜಿ. ಘಂಟೆ, ತೇರದಾಳದ ಕ್ಷೇತ್ರಾಧಿಪತಿ ಶ್ರೀ ಅಲ್ಲಮ್ಮಪ್ರಭು ಬೃಹನ್ಮಠದ ೭೦ ಕೆ.ಜಿ. ಘಂಟೆ, ಸುಕ್ಷೇತ್ರ ಮುಗಳಖೋಡ ಶ್ರೀ ಯಲ್ಲಾಲಿಂಗ ಪ್ರಭು ಮಹಾರಾಜರ ಸಮಾಧಿ ಮಂದಿರದ ಮೇಲಿನ ಕಳಸ, ೪೫ ಕೆ.ಜಿ ತೂಕದ ಪಂಚಲೋಹದ ಪಲ್ಲಕ್ಕಿ, ಮುಸ್ಲಿಂ ಬಾಂಧವರು ಮೋಹರಂ ಹಬ್ಬದಲ್ಲಿ ಮೆರವಣಿಗೆ ಮಾಡುವ ಅಲಾಭ್, ಶ್ರೀ ಲಕ್ಷ್ಮಿ, ಶ್ರೀ ಸರಸ್ವತಿ, ಶ್ರೀ ಗಣೇಶ, ಶ್ರೀ ವೀರಭದ್ರೇಶ್ವರ, ಶ್ರೀ ಬಸವಣ್ಣ, ಶ್ರೀ ಹನುಮಾನ, ನಟರಾಜ, ಹೀಗೆ ವಿವಿಧ ಮೂರ್ತಿಗಳು, ವಿವಿಧ ಪ್ರಾಣಿಗಳ ಮೂರ್ತಿಗಳು, ಜಾಗಟೆ, ನಂದಾದೀಪ, ಗಂಗಾಳ, ತಾಳವಾದ್ಯ, ಹೀಗೆಯೇ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಆಕರ್ಷಕ ಮೂರ್ತಿಗಳ ತಯಾರಿಕೆಯಿಂದ ಬಾಗಲಕೋಟ ಜಿಲ್ಲೆಗೆ ಹೆಸರು ತಂದವರು ಹನಗಂಡಿಯ ಕಂಚುಗಾರರು.

## ಮೂರ್ತಿ ತಯಾರಿಕೆಯ ಹಿನ್ನಲೆ

ಬಾಗಲಕೋಟ ಜಿಲ್ಲೆಯ ಹನಗಂಡಿ ಗ್ರಾಮದಲ್ಲಿ ದೇಸಾಯಿಯವರ ಪ್ರೋತ್ಸಾಹದ ಫಲವಾಗಿ ಸುಮಾರು ೬೦ಕ್ಕು ಹೆಚ್ಚು ಕಂಚುಗಾರರ ಮನೆಗಳಿದ್ದವು. ತಾಮ್ರ, ಕಂಚು, ಹಿತ್ತಾಳೆ ಮುಂತಾದ ಪಂಚಶಿಲ್ಪ ಮೂರ್ತಿಗಳನ್ನು ಹನಗಂಡಿಯಲ್ಲಿಯೇ ಏಕೆ ತಯಾರಿಸುತ್ತಾರೆ ಎಂಬ ಪ್ರಶ್ನೆ ಕಾಣಬಹುದು. ಹನಗಂಡಿಯಲ್ಲಿ ಅನೇಕ ವರ್ಷಗಳ ಹಿಂದೆ ಅರಣ್ಯ ಪ್ರದೇಶವಾಗಿತ್ತು. ಗಿಡಗಳಲ್ಲಿ ಜೇನು, ಸಾಕಷ್ಟು ಕಟ್ಟಿಗೆ ಇವುಗಳಿಗಿಂತ ಹೆಚ್ಚಾಗಿ ತಾಮ್ರದ ಅದಿರು, ಜೇಡಿಮಣ್ಣು ಸಿಗುತ್ತಿತ್ತು. ಇದರಿಂದ ಮೂರ್ತಿ ತಯಾರಿಕೆಗೆ ಬೇಕಾದ ಕಚ್ಚಾ ವಸ್ತುಗಳು ಸುಲಭವಾಗಿ ಲಭ್ಯವಾಗುತ್ತಿದ್ದವು. ಮೇಣ, ಇದ್ದಿಲು, ತಾಮ್ರದ ಅದಿರು, ಜೇಡಿ ಮಣ್ಣಿನಿಂದ ಮೂರ್ತಿ ತಯಾರಿಸಲು ಆಗಿನ ದೇಸಗತಿ ದೇಸಾಯಿಯವರು ಕೊಟ್ಟ ಪ್ರೋತ್ಸಾಹದಿಂದ ತಲೆತಲಾಂತರಗಳಿಂದ ಈ ಉದ್ಯೋಗ ಬಂದಿದೆಯೆಂದು ಕಂಚುಗಾರ ಮೂರ್ತಿ ತಯಾರಕ ಶ್ರೀಕಾಂತ ಗೌರಿಮನಿಯವರು (ಚಿತ್ರ ಸಂಖ್ಯೆ–೧೩) ತಿಳಿಸುತ್ತಾರೆ.

ಹಿಂದಿನಿಂದ ಬಂದ ಹಿರಿಯರ ವೃತ್ತಿಯನ್ನೇ ತಮ್ಮ ಮೂಲ ವೃತ್ತಿಯನ್ನಾಗಿಸಿಕೊಂಡು ಶ್ರದ್ಧಾ, ಭಕ್ತಿಯಿಂದ ಮೂರ್ತಿ ತಯಾರಿಸುತ್ತಾರೆ. ಈಗೀಗ ಕಚ್ಚಾ ವಸ್ತುಗಳಿಗಾಗಿ ಮಹಾರಾಷ್ಟ್ರದ ಸಾಂಗಲಿ, ಮಿರಜ, ಪುಣೆಗಳಿಗೆ ಹೋಗುತ್ತೇವೆ. ದೊಡ್ಡ ಗಾತ್ರದ ಮೂರ್ತಿಗಳನ್ನು ತಯಾರಿಸಲು ೨–೩ ತಿಂಗಳು ಬೇಕಾಗಬಹುದು. ಈ ಮೂರ್ತಿ ತಯಾರಿಕೆಯಲ್ಲಿ ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲರೂ

ತೊಡಗುತ್ತಾರೆ. ಶೈಕ್ಷಣಿಕವಾಗಿ ಹಿಂದುಳಿದ ಕಂಚುಗಾರರು ತಮ್ಮ ಮಕ್ಕಳನ್ನು ಹೆಚ್ಚಾಗಿ ಮೂರ್ತಿ ತಯಾರಿಕೆಯಲ್ಲಿ ತೊಡಗಿಸಿಕೊಳ್ಳಬೇಕಾದ ಪರಿಸ್ಥಿತಿ ಇವರದು. ಮೂರ್ತಿ ತಯಾರಿಕೆ ದೃಷ್ಟಿಯಿಂದ ಶಿಕ್ಷಣ ಅರ್ಧಕ್ಕೆ ನಿಲ್ಲಿಸಿರುವದು ಕಂಡು ಬರುವದು.

**ಮೂರ್ತಿ ತಯಾರಿಕೆ**

ಹನಗಂಡಿ ಕಂಚಿನ ಮೂರ್ತಿಗಳ ತಯಾರಕರು ಮೊದಲಿಗೆ ಜೇಡಿಮಣ್ಣು ತಂದು ನೀರಿನಲ್ಲಿ ಕಲಿಸಿ ಹದಮಾಡಿ ಕಚ್ಚಾ ಆಕೃತಿ ತಯಾರಿಸುವರು. ಇದರ ಮೇಲೆ ತೆಳುವಾದ ಮೇಣದ ಲೇಪನ ಮಾಡುವರು. ಅದಕ್ಕೆ ಪುಟ್ಟ ತಂತಿ ಬಿಗಿದು ಕಟ್ಟಿ ಮತ್ತೆ ಮಣ್ಣು ಬಡಿಯುವರು. ಮೂರ್ತಿಯ ಕೆಳಭಾಗದಲ್ಲಿ ಒಂದು ಚಿಕ್ಕರಂಧ್ರ ಬಿಡುವರು. ಹೀಗೆ ನಿರ್ಮಾಣಗೊಂಡ ಕಚ್ಚಾ ಮೂರ್ತಿಯನ್ನು ಬಿಸಿಲಿನಲ್ಲಿ ಒಣಗಿಸುತ್ತಾರೆ. ನಂತರ ಒಂದು ಕೆ.ಜಿ.ಗೆ ನೂರು ಸೆಗಣಿಯ ಕುರುಳು (ಕುಳ್ಳು)ಗಳನ್ನು ಹಾಕಿ ಸುಡುತ್ತಾರೆ. ಆಗ ಮೂರ್ತಿಯೊಳಗಿನ ಎಲ್ಲಾ ಮೇಣವು ಶಾಖದಿಂದ ಕರಗಿ ರಂಧ್ರದ ಮೂಲಕ ಹೊರ ಬರುವದು. ಆಗ ಒಳಗಿರುವ ಜೇಡಿಮಣ್ಣಿನ ಮೂರ್ತಿ ಹಾಗೂ ಹೊರಗೆ ಲೇಪಿಸಿರುವ ಜೇಡಿ ಮಣ್ಣಿನ ನಡುವೆ ಮೇಣದಲ್ಲಿ ತಯಾರಿಸಿದ ಪಡಿಯಚ್ಚು ಒಳಗಡೆಯೇ ಉಳಿಯುತ್ತದೆ. ಕಂಚುಗಾರರು ಒಂದು ಮೂಸೆಯಲ್ಲಿ ಹಿತ್ತಾಳೆ ಅಥವಾ ತಾಮ್ರವನ್ನು ಕರಗಿಸುತ್ತಾರೆ. ಬಿಟ್ಟಿರುವ ರಂಧ್ರದ ಮೂಲಕ ಈ ದ್ರವವನ್ನು ಹಾಕುತ್ತಾರೆ. ಈ ದ್ರವವು ಒಳಗಿರುವ ಮೂರ್ತಿಯ ಪಡಿಯಚ್ಚಿನಲ್ಲಿ ಗಟ್ಟಿಯಾಗಿ ಸೇರಿಕೊಂಡು ನಿಜವಾದ ಮೂರ್ತಿ ತಯಾರಾಗುತ್ತದೆ. ಮೂರ್ತಿಯ ಮೇಲಿನ ಜೇಡಿಮಣ್ಣು ತೆಗೆದು ಕಂಚುಗಾರರು ಉಳಿಯಿಂದ ಮೂರ್ತಿ ಕೆತ್ತಿ ಶುಚಿಗೊಳಿಸುತ್ತಾರೆ. ನಂತರ ಪಾಲೀಸ್ ಮಾಡಿದಾಗ ಥಳಥಳನೆ ಹೊಳೆಯುವ ಮೂರ್ತಿಗಳು ಕಣ್ಮನ ಸೆಳೆಯುವವು. ಈ ಮೂರ್ತಿ ತಯಾರಿಕೆಗೆ ಬೇಸಿಗೆ ಕಾಲ ಹಾಗೂ ಚಳಿಗಾಲ ಸೂಕ್ತವಾಗಿರುತ್ತದೆ ಮಳೆಗಾಲದಲ್ಲಿ ಮೂರ್ತಿ ತಯಾರಿಕೆ ಕಷ್ಟಕರವಾಗುತ್ತದೆ ಎಂದು ಕಂಚುಗಾರರ ಅಭಿಪ್ರಾಯವಾಗಿದೆ.

**ಮಾರುಕಟ್ಟೆ ವ್ಯಾಪ್ತಿ**

ಕಂಚುಗಾರರು ತಯಾರಿಸಿದ ಮೂರ್ತಿಗಳ ತೂಕದ ಅನುಗುಣವಾಗಿ ಬೆಲೆ ನಿಗದಿ ಪಡಿಸಿ ಮಾರಾಟ ಮಾಡಲಾಗುತ್ತದೆ. ಕನಿಷ್ಠ ೩೫೦ ರಿಂದ ಆರಂಭಗೊಂಡು ಸಾವಿರಾರು ರೂಪಾಯಿಗಳವರೆಗೆ ಮೂರ್ತಿ ಮಾರಾಟ ಮಾಡುವರು. ಕಂಚುಗಾರರು ತಾವು ತಯಾರಿಸಿದ ಮೂರ್ತಿಗಳನ್ನು ಮಾರಾಟ ಮಾಡಲು ಅಂಗಡಿಗಳಿಲ್ಲ. ಮಾರುಕಟ್ಟೆ ಇಲ್ಲ. ಮೂರ್ತಿ ಬೇಕಾದವರು ಹನಗಂಡಿ ಗ್ರಾಮಕ್ಕೆ ಬರಬೇಕು. ತಮಗೆ ಬೇಕಾದ ಮೂರ್ತಿಯ ಚಿತ್ರಣವನ್ನೋ ಅಥವಾ ಹಳೆಯ ಮೂರ್ತಿ ತಂದು ಕೊಟ್ಟರೆ ಅವರು

ತಿಳಿಸಿದ ಪ್ರಕಾರ ಆಕಾರ, ಗಾತ್ರ, ಎತ್ತರವನ್ನು ಗಮನದಲ್ಲಿರಿಸಿ ಮೂರ್ತಿ ತಯಾರಿಸುವರು.

ಮೂರ್ತಿ ತಯಾರಕರ ಸಮಸ್ಯೆಗಳು ಹಲವು. ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ಹನಗಂಡಿ ಕಂಚುಗಾರರು ಬಡತನದ ಬೇಗೆಯಿಂದ ಹೊರಬಾರದೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅತ್ಯಾಕರ್ಷಕ ಮೂರ್ತಿಗಳನ್ನು ತಯಾರಿಸಿ ಎಲ್ಲೆಡೆ ಹನಗಂಡಿ ಕಂಚುಗಾರರು ಕಲೆಯಿಂದ ಮಿಂಚಿದರೂ, ಚಿಕ್ಕಮನೆ ದೊಡ್ಡ ಸಂಸಾರ, ದುಡಿದದ್ದು ಹೊಟ್ಟೆ ಬಟ್ಟೆಗೂ ಸಾಲದು ಮೂರ್ತಿ ತಯಾರಿಕೆಯಲ್ಲಿ ವೈಜ್ಞಾನಿಕ ಪದ್ದತಿ ಅಳವಡಿಸಿಕೊಳ್ಳುವ ಆರ್ಥಿಕ ಸ್ಥಿತಿ ಕಂಚುಗಾರರಿಗಿಲ್ಲ ಕಾರ್ಖಾನೆಗಳಿಲ್ಲ ಸರ್ಕಾರದಿಂದ ಯಾವುದೇ ಸಹಾಯ ಸಹಕಾರ ಸಿಗುತ್ತಿಲ್ಲವೆಂದು ಹೇಳುತ್ತಾರೆ.

ಈ ರೀತಿಯಾಗಿ ದೇಸಾಯಿಯವರ ಆಶ್ರಯದಲ್ಲಿ ಕಂಚುಗಾರರು ಬೆಳೆದು ಬಂದು ಹನಗಂಡಿಗೆ ಹೆಸರು ತಂದಿರುತ್ತಾರೆ. ಇವತ್ತಿಗೂ ಕೂಡಾ ಕಂಚಿನ ಮೂರ್ತಿ, ತಾಳ, ಗಂಗಾಳ, ಘಂಟೆ, ಜಾಗಟೆ, ತಟ್ಟೆ, ಪಲ್ಲಕ್ಕಿ, ಪ್ರಾಣಿಗಳು, ಪಕ್ಷಿಗಳು ಮುಂತಾದವುಗಳ ತಯಾರಿಕೆಗೆ ಹೆಸರುವಾಸಿಯಾಗಿದೆ ಎಂಬುದು ತಿಳಿದು ಬರುತ್ತದೆ.

# ಅಡಿ ಟಿಪ್ಪಣೆಗಳು

**ಆಡಳಿತ ವ್ಯವಸ್ಥೆ**

೧. ಶ್ರೀ. ಕೃಷ್ಣಗೌಡಾ ಅಲ್ಲಪ್ಪಾ ದೇಸಾಯಿಯವರ ಹೇಳಿಕೆಯಿಂದ ದಿ: ೦೧/೦೭/೨೦೦೯.

೨. ಡಾ. ಸಂಗಮೇಶ ಕಲ್ಯಾಣಿ - "ಬಾಗಲಕೋಟೆ ಜಿಲ್ಲೆಯ" ದೇಸಗತಿಗಳು
ಕನ್ನಡ ವಿಶ್ವವಿದ್ಯಾಲಯ, ಹಂಪಿ. - ೨೦೦೬. ಪುಟ ಸಂಖ್ಯೆ ೬೦.

೩. ಪ್ರೊ. ಲಕ್ಷ್ಮಣ ತೆಲಗಾವಿ. ಕರ್ನಾಟಕ ಪಾಳೇಗಾರರ ನ್ಯಾಯಾಡಳಿತ. ೨೦೦೮
ಪುಟ ಸಂಖ್ಯೆ - ೩೩೮

**ಸಾಮಾಜಿಕ ಜೀವನ**

೧. ಶ್ರೀಮತಿ. ಪದ್ಮಾವತಿ ಜಕ್ಕಪ್ಪಾ ದೇಸಾಯಿ ಅವರ ಸಂದರ್ಶಣದಿಂದ ದಿ: ೦೧/೦೭/೨೦೦೯

೨. ಮಾಲಗೋನಕರ ಮನೋಹರ ಛತ್ರಪತೀಸ್ ಆಫ್ ಕೊಲ್ಹಾಪೂರ.-ಬಾಂಬೆ.
೧೯೭೧ - ಪುಟ ಸಂಖ್ಯೆ ೩೭೧)

೩. ಈ ಮಾಹಿತಿಯನ್ನು ದೇಸಾಯಿ ಮನೆತನದ ಸ್ತ್ರೀಯರು ಕೊಟ್ಟ ವಿವರಣೆಯ ಮೇಲೆ
ಸಂಗ್ರಹಿಸಲಾಗಿದೆ. ಅವರು ಹಳೆಯ ಆಭರಣಗಳನ್ನು ತೋರಿಸಿದರು. ದಿ: ೧೦/೦೭/೦೯

**ಅರ್ಥಿಕ ಜೀವನ**

೧. ದೇಸಾಯಿ ಪರಗಣ ತೇರದಾಳ ಜೂನೆ ಕಾಗದ ಪತ್ರ ಹನಗಂಡಿ. ಪುಟ ಸಂಖ್ಯೆ-೪೦.

೨. ಪ್ರೊ. ಎಸ್. ಬಿ. ಮಾಟೋಳಿ. ಜಮಖಂಡಿ ತಾಲೂಕ ದರ್ಪಣ. ೨೦೦೮
ಪುಟ ಸಂಖ್ಯೆ : ೭೦

೩. ಬಿಜಾಪೂರ ಜಿಲ್ಲೆಯ ಗೆಜೆಟೇರಿಯರ್ - ಪುಟ ಸಂಖ್ಯೆ - ೪೬

೪. ಶ್ರೀ. ಪಸನ್ನಕುಮಾರ ಶಂಕರಗೌಡ ದೇಸಾಯಿಯವರ ಸಂದರ್ಶನದಿಂದ ದಿ: ೧೦/೦೭/೦೯.

೫. ಭರಮಪ್ಪಾ ಧರೆಪ್ಪಾ ಖಿಲ್ಲೆದಾರ ಅವರ ಹೇಳಿಕೆಯಿಂದ ದಿ: ೧೦/೦೭/೨೦೦೯.

೬. ಹಳಕಟ್ಟಿ ಫ.ಗು.(ಸಂ) ಶಿವಾನುಭವ ನಂ. ೨೦ ಪುಟ ಸಂಖ್ಯೆ - ೩೦.೩೧.೩೨

೭. ಬಾಂಬೆ (ಪ್ರೊವೆನ್ಸ್) ಲ್ಯಾಂಡ ರೆವೆನ್ಯೂ ಆ್ಯಕ್ಟ ಭಾಗ - ೨ ಪುಟ ಸಂಖ್ಯೆ - ೧೮

**ಧಾರ್ಮಿಕ ಆಚರಣೆ**

೧. ಬಿಜಾಪೂರ ಜಿಲ್ಲೆಯ ಗೆಜೆಟಿಯರ್ ಪುಟ ಸಂಖ್ಯೆ – ೧೦೯೧

೨. ನಿಲೇಶ ಜಕ್ಕಪ್ಪಾ ದೇಸಾಯಿಯವರ ಸಂದರ್ಶನದಿಂದ ದಿ: ೦೧/೦೭/೨೦೦೯

೩. ಬಿಜಾಪೂರ ಜಿಲ್ಲೆಯ ಗೆಜೆಟಿಯರ್ ಪುಟ ಸಂಖ್ಯೆ – ೪೬

**ಕಲೆ ಮತ್ತು ವಾಸ್ತುಶಿಲ್ಪ**

೧. ದು. ನಿಂ. ಬೆಳಗಲಿ–ಜಮಖಂಡಿ ತಾಲೂಕ ದರ್ಶಣ–ಐಬಿಎಚ್ ಪ್ರಕಾಶನ ಬೆಂಗಳೂರು. ೧೯೮೬ ಪುಟ ಸಂಖ್ಯೆ – ೨೮

೨. ಕನ್ನಡ ಸಾಹಿತ್ಯ ಅಕಾಡಮಿ ಬಳಗ ಸಂಯುಕ್ತ ಕರ್ನಾಟಕ–ಹುಬ್ಬಳ್ಳಿ ದಿ: ೩೦/೦೭/೨೦೦೯

೩. ಮ. ಕೃ ಮೇಗಾಡಿ–ಜನಪದ ಪತ್ರಿಕೆ–ಅಕ್ಟೋಬರ ೨೦೦೪ ಪುಟ ಸಂಖ್ಯೆ–೩೨.೩೩.೩೪

೪. ಶ್ರೀಕಾಂತ ನಿಂಗಪ್ಪಾ ಗೌರಿಮನಿಯವರ ಹೇಳಿಕೆಯಿಂದ ದಿ: ೦೧/೦೭/೨೦೦೯

೫. ನಿಂಗಪ್ಪಾ ಅವ್ವಣ್ಣಾ ಗೌರಿಮನಿಯವರ ಸಂದರ್ಶನದಿಂದ ದಿ: ೧೦/೦೭/೨೦೦೯

ಅಧ್ಯಾಯ ೪

# ಸಮಾರೋಪ

ರಾಜರ ಮತ್ತು ಜನರ ಮಧ್ಯ ಪ್ರಜಾಕ್ಷೇಮ ಬಯಸುವ ಸಂವಾಹಕರಾಗಿದ್ದ ದೇಸಗತಿಗಳನ್ನು ಒಂದು ಶಿಸ್ತಿನ ಅಧ್ಯಯನಕ್ಕೆ ಒಳಪಡಿಸುವುದರಿಂದ ಗತಿಸಿ ಚದುರಿ ಹೋಗಬಹುದಾಗಿದ್ದ ವಿಷಯಗಳನ್ನು ಚರಿತ್ರೆಯಲ್ಲಿ ಹಿಡಿಯುವುದೇ ನನ್ನ ಅಧ್ಯಯನದ ಪ್ರಾಮಾಣಿಕ ಪ್ರಯತ್ನವಾಗಿದೆ. ಸಂದಿಗ್ದ ಪರಿಸ್ಥಿತಿಯಲ್ಲಿ ತಲೆ ಎತ್ತಿದ ದೇಸಗತಿಗಳು ಸಂಸ್ಥಾನಗಳ ಆಕ್ರಮಣಕಾರಿ ಮನೋಭಾವದ ವಿರುದ್ಧ ಸ್ವಾತಂತ್ರ್ಯ ಘೋಷಿಸಿಕೊಂಡವರು. ವಿಜಯನಗರದ ನಂತರ ದೇಸಗತಿಗಳ ಆಳ್ವಿಕೆಯು ಉತ್ತರ ಕರ್ನಾಟಕದಲ್ಲಿ ಕಂಡು ಬರುತ್ತದೆ. ದೊಡ್ಡ ದೊಡ್ಡ ಸಂಸ್ಥಾನಿಕರ, ಸರದಾರರ ಆಳ್ವಿಕೆಯಲ್ಲಿ ತಮ್ಮ ವಿಶಿಷ್ಟ ಕಾರ್ಯಗಳ ಮೂಲಕ ಅವರ ಕೃಪೆಗೆ ಪಾತ್ರರಾಗಿದ್ದರು. ಅದೇ ವೇಳೆಗೆ ದೇಸಾಯಿಗಳ, ಪಾಳೆಗಾರರ ಶಕ್ತಿ ಸಾಮರ್ಥ್ಯಗಳು ಕೂಡಾ ರಾಜರ ಬಲವನ್ನು ಸಹ ಹೆಚ್ಚಿಸಿತ್ತು.

ಹನಗಂಡಿ ದೇಸಾಯಿಗಳು ಈ ನಾಡಿಗಾಗಿ ಶ್ರಮಿಸಿದ ಶ್ಲಾಘನೀಯ ಸಾಧನೆಗಳನ್ನು ಅಲಕ್ಷೀಸಬಾರದೆಂಬ ಆಶಯದೊಂದಿಗೆ ಅವರ ಆಡಳಿತ ಕ್ರಮ, ಕಂದಾಯ ವ್ಯವಸ್ಥೆ, ಸಾಮಾಜಿಕ ಜೀವನ, ಸಾರ್ವಜನಿಕ ಉಪಯುಕ್ತ ಕಾರ್ಯಗಳನ್ನು ಬಿಂಬಿಸುವುದೇ ಈ ನನ್ನ ಅಧ್ಯಯನದ ಉದ್ದೇಶವಾಗಿದೆ. ಸಮಾಜದ ಕಲ್ಯಾಣವನ್ನೇ ಸಾಧಿಸುತ್ತಾ ಧರ್ಮ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಗ್ರಾಮಗಳ ಪುನರ್ ನಿರ್ಮಾಣ ಹಾಗೂ ನೈಸರ್ಗಿಕ ಪರಿಸರವನ್ನು ಕಾಪಾಡುವ ಜನಮನದಲ್ಲಿ ಧೈರ್ಯ, ಸಾಹಸಗಳನ್ನು ತುಂಬುವ ದೇಸಾಯಿಗಳ ಅತ್ಯಮೋಘವಾದ ಪಾತ್ರವನ್ನು ಮರೆಯುವಂತಿಲ್ಲ. ಉನ್ನತ ಹುದ್ದೆಗಳನ್ನು ಅಲಂಕರಿಸಿದರೂ, ಯಾರೊಂದಿಗೂ ವೈರತ್ವ ಬೆಳೆಸದೇ, ಪ್ರಜೆಗಳ ಮತ್ತು ರಾಜರುಗಳ ನಡುವೆ ಸುಮಧುರ ಬಾಂಧವ್ಯದ ನಿರ್ಮಾತೃಗಳು. ಈ ದೇಸಾಯಿಗಳು ದಕ್ಷಿಣ ಕರ್ನಾಟಕದ ಪಾಳೆಗಾರರಂತೆ ಉತ್ತರ ಕರ್ನಾಟಕದ ಬಾಗಲಕೋಟ, ವಿಜಾಪೂರ, ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಹರಡಿಕೊಂಡಿರುವ ದೇಸಗತಿಗಳ ಪಾತ್ರ ಚಿರಸ್ಮರಣಿಯ.

ಹನಗಂಡಿ ದೇಸಾಯಿಗಳ ಧಾರ್ಮಿಕ ಸಹಿಷ್ಣುತೆಯೂ ಮೆಚ್ಚುವಂತಹದ್ದು. ಜೈನರಾಗಿದ್ದರೂ, ಅನ್ಯ ಧರ್ಮಿಯರೊಂದಿಗಿನ ಸುಮಧುರ ಭಾಂಧವ್ಯ ಚರಿತ್ರಾರ್ಹ. ಬೇರೆಯವರ ಧಾರ್ಮಿಕ ಮೌಲ್ಯಗಳಿಗೆ ಕುಂದು ಬರದಂತೆ ಆಡಳಿತ ನಿರ್ವಹಿಸಿದವರು ಈ ದೇಸಾಯಿಗಳು.

ಪ್ರಸ್ತುತ ಸಂಪ್ರಬಂಧದ ಮೊದಲನೆ ಅಧ್ಯಾಯದಲ್ಲಿ ದೇಸಗತಿಗಳ ಕಾರ್ಯಕ್ಷೇತ್ರ, ಹುಟ್ಟು ಬೆಳವಣಿಗೆ ಕುರಿತು ವಿಶ್ಲೇಷಿಸಲಾಗಿದೆ. ದೇಸಗತಿಗಳ ಸಾಂಸ್ಕೃತಿಕ ಕೊಡುಗೆಗಳಾದ ಸಾಮಾಜಿಕ, ಆಡಳಿತ, ಕಂದಾಯವ್ಯವಸ್ಥೆ, ಶೈಕ್ಷಣಿಕ ವ್ಯವಸ್ಥೆ, ಕಲೆ ಮತ್ತು ವಾಸ್ತುಶಿಲ್ಪವನ್ನು ಗಮನದಲ್ಲಿಟ್ಟುಕೊಂಡು ವಿವರಿಸಲಾಗಿದೆ. ಪ್ರತಿಯೊಂದು ಅಧ್ಯಾಯಗಳಲ್ಲಿ ಆರಂಭಿಸಿದ ವಿವಿಧ ವಿಷಯಗಳನ್ನು ಜೋಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಹಾಗೂ ಅವುಗಳ ಸಾಮಾಜಿಕ ಸಾಂಸ್ಕೃತಿಕ ಉಪಯುಕ್ತತೆಯನ್ನು ಚರ್ಚಿಸಲಾಗಿದೆ. ಇಂತಹ ದೇಸಗತಿಗಳನ್ನು ಉಳಿಸಿ ಬೆಳೆಸಿಕೊಳ್ಳಲು ಬೇಕಾದ ಅಭಿಪ್ರಾಯವನ್ನೂ ಮಂಡಿಸಲಾಗಿದೆ.

ಈ ನನ್ನ ಅಧ್ಯಯನದ ಪರಿಕರಗಳು, ಮಾಹಿತಿಗಳು ಉತ್ತರ ಕರ್ನಾಟಕದ ಪರಿಸರದಲ್ಲಿ ಘಸರಿಸಿವೆ. ಈ ದೇಸಗತಿಗಳ ಸಾಂಸ್ಕೃತಿಕ ಕೊಡುಗೆಗಳನ್ನು ಅರಿಯುವದು ಅಧ್ಯಯನದ ಒಂದು ಉದ್ದೇಶವಾಗಿದೆ.

## ಕೊನೆಯ ಮಾತು

ಲಭ್ಯವಿರುವ ಹಳೆಯ ಆಕಾರಗಳೆಲ್ಲವನ್ನು, ದಾಖಲೆಗಳೆಲ್ಲವನ್ನು ಕ್ರೋಢಿಕರಿಸಿದಾಗ ಹನಗಂಡಿ ದೇಸಗತಿಗಳ ಪರಿಚಯ ಮಾಡಿಕೊಡುವ ಪ್ರಯತ್ನ ನನ್ನಲ್ಲಿ ಬಂತು. ಅದರ ಫಲಶೃತಿಯೇ ನನ್ನ ಪ್ರಸ್ತುತ ಸಂಪ್ರಬಂಧ. ಅಧ್ಯಯನದುದ್ದಕ್ಕೂ ಹಲವಾರು ಪ್ರಶ್ನೆಗಳಿಗೆ ಉತ್ತರ ಹುಡುಕುವಾಗ ಏರಿಳಿತಗಳುಂಟಾದದ್ದು ಸಹಜ. ಆದರೆ ಪ್ರತಿಯೊಂದನ್ನು ಚರ್ಚಿಸಿ ತರ್ಕಿಸಿ ತೂಗಿನೋಡಿ ಯಾವುದೇ ಪಕ್ಷಪಾತ ಗುಣ ಅನುಸರಿಸದೇ ಮುಕ್ತ ಮನಸ್ಸಿನ ಪ್ರಾಮಾಣಿಕ ಅನಿಸಿಕೆಯಾಗಿದೆ.

ಅಧ್ಯಯನದ ಅನುಕೂಲಕ್ಕೆ ದೇಸಗತಿಗಳ ಪರಿಕರ ಮಾಹಿತಿಯನ್ನು ಭೇಧಿಸಿ ಅದರ ಕೇಂದ್ರ ಬಿಂದುವನ್ನು ಪ್ರವೇಶಿಸುವ ನನ್ನ ಶ್ರಮದಲ್ಲಿ ಸಾರ್ಥಕತೆ ಸಾಧಿಸಿರುವೆನೆಂಬ ತೃಪ್ತಿ ನನಗಿದೆ. ಆದರೂ, ಅಧ್ಯಯನ ಕ್ಷೇತ್ರ ಎಂಬುದು ಸಂಶೋಧನಾ ನಿರತ ಕ್ಷೇತ್ರ. ಎಲ್ಲವೂ ಹೇಳಿದ್ದೇನೆನ್ನುವ ಅಹಃ ನನ್ನದಲ್ಲ. ಚದುರಿದ ಅನೇಕ ಸಾಮಗ್ರಿಗಳನ್ನು ಮಾಹಿತಿಗಳನ್ನು ಕಲೆ ಹಾಕುವ ಪ್ರಯತ್ನದಲ್ಲಿ ಕೆಲವು ವಿಷಯಗಳು ಹಿಡಿತದಲ್ಲಿ ತೂರಿಹೋದ ಚರ್ಚಿಸುವಲ್ಲಿ ಚದುರಿಹೋದ ವಿಷಯಗಳನ್ನು ಮುಂದಿನ ಶೋಧಕರಿಗೆ ಬಿಟ್ಟಿದ್ದೇನೆ. ಈ ಸವಾಲನ್ನು ಸ್ವೀಕರಿಸುವ ಸಂಶೋಧಕರು ಕಾರ್ಯಪ್ರವರ್ತರಾಗಲೆಂಬುದೇ ನನ್ನ ಸಂಪ್ರಬಂಧದ ಆಶಯ.

# ಪರಾಮರ್ಶನ ಗ್ರಂಥಗಳು.


**ಕನ್ನಡ ಗ್ರಂಥಗಳು**

೧. ದು. ನಿಂ. ಬೆಳಗಲಿ – ಜಮಖಂಡಿ ತಾಲೂಕಾ ದರ್ಶನ.
ಪ್ರಕಾಶಕರು : ಡಿ.ಬಿ.ಎಚ್. ಪ್ರಕಾಶನ ಬೆಂಗಳೂರು. – ೧೯೮೬

೨. ಪ್ರೊ. ಲಕ್ಷ್ಮಣ ತೆಲಗಾಂವಿ – ಕರ್ನಾಟಕ ಪಾಳೇಗಾರರ ನ್ಯಾಯಾಡಳಿತ.
ಪ್ರಕಟನೆಯ ವರ್ಷ – ೨೦೦೮.

೩. ಪ್ರೊ. ಎಂ.ಎಂ. ಕಲಬುರ್ಗಿ (ಸಂ) : ಕರ್ನಾಟಕದ ಕೈಫಿಯತ್ತುಗಳು.
ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ – ೧೯೯೪.

೪. ನಾಗಭೂಷಣ ಮೂರ್ತಿ ಎ.ಸಿ. – "ಧಾರವಾಡ ಜಿಲ್ಲೆಯ ದೇಸಗತಿಗಳು".
ಕರ್ನಾಟಕ ವಿ.ವಿ.ಗೆ ಸಲ್ಲಿಸಿದ ಪಿ.ಎಚ್.ಡಿ ಪ್ರಬಂದ – ೧೯೯೯.

೫. ಡಾ. ಸಂಗಮೇಶ ಕಲ್ಯಾಣಿ – ಬಾಗಲಕೋಟ ಜಿಲ್ಲೆಯ ದೇಸಗತಿಗಳು.
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿ.ಎಚ್.ಡಿ ಪ್ರಭಂಧ–೨೦೦೬.

೬. ಪ್ರೊ. ಎಸ್. ಬಿ. ಮಾಟೋಳಿ – ಜಮಖಂಡಿ ತಾಲೂಕಾ ದರ್ಪಣ. – ೨೦೦೮.

೭. ಡಾ॥ ಶೇಖದಾರ – ಬಿಜಾಪೂರ ಜಿಲ್ಲೆಯ ದೇಸಗತಿಗಳು.
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ – ೨೦೦೭.

**ಮರಾಠಿ ಗ್ರಂಥಗಳು**

೧. ದೇಸಾಯಿ ಪರಗಣ ತೇರದಾಳ ಜುನೆ ಕಾಗದ ಪತ್ರ ಹನಗಂಡಿ.

೨. ದೇಸಾಯಿ ಬಿ.ಎ. ಮಹಾರಾಷ್ಟ್ರಂಚಾ ಕರ್ತವ್ಯಶಾಲಿನಿ.

೩. ಸರ್ ದೇಸಾಯಿ ಜಿ,ಎಸ್. ಐತಿಹಾಸಿಕ ಪತ್ರ ವ್ಯವಹಾರ.
ಸಂಪುಟ ೧ ಮತ್ತು ೨

**ಇಂಗ್ಲೀಷ ಗ್ರಂಥಗಳು**

೧. ಮಲಗೋನಕರ ಮನೋಹರ – ಛತ್ರಪತಿಸ್ ಆಫ್ ಕೋಲ್ಹಾಪೂರ.
ಪಾಪ್ಯುಲರ್ ಪ್ರಕಾಶನ ಮುಂಬೈ – ೧೭೭೧.

೨. ರಾನಡೆ ಎಂ.ಜಿ. – ರೈಜ್ ಆಪ್ ಮರಾಠಾ ಪವರ್ ಮುಂಬೈ – ೧೯೬೦.

೩. ಗ್ರಾಂಟ ಡಫ್ ಜೆ.ಸಿ. – ಎ ಹಿಸ್ಟರಿ ಆಪ್ ಮಹಾರಾಷ್ಟ್ರ
ಆಕ್ಸಪರ್ಡ – ೧೮೯೫.

**ಪತ್ರಿಕೆಗಳು**

೧. ಹಳಕಟ್ಟಿ ಫ.ಗು. (ಸಂ) ಶಿವಾನುಭವ ಸಂಪುಟ ೨ ರಿಂದ ೨೦.

೨. ಮಹಾರಾಷ್ಟ್ರ ಆರ್ಕ್ಯೂಜ್ ಡಿಪಾರ್ಟಮೆಂಟ ಬುಲೆಟಿನ್ ನಂ. ೧.

೩. ಜನಪದ – ಅಕ್ಟೋಬರ ೨೦೦೪.

೪. ಸಂಯುಕ್ತ ಕನಾಟಕ – ಹುಬ್ಬಳ್ಳಿ – ೩೦/೦೨/೨೦೦೯.

# ಪಾರಿಭಾಷಿಕ ಪದಗಳು

| | | |
|---|---|---|
| ಓಘ | – | ಒಲವು |
| ಇನಾಂ | – | ಬಕ್ಷಿಸ ಪತ್ರ |
| ಉಂಬಳಿ | – | ತೆರಿಗೆ ಹೇರಿದ ಜಮೀನು. |
| ಕರಾಬ | – | ಒಳ್ಳೆಯದಲ್ಲದ ಭೂಮಿ |
| ಖಾಜಿ | – | ನ್ಯಾಯ ನಿರ್ಣಯಿಸುವವನು |
| ಖುಷ್ಕಿ | – | ಒಣ ಬೇಸಾಯ |
| ಘರಾಣಾ | – | ಪರಗಣೆಯ ಆಳ್ವಿಕೆಯ ಪ್ರದೇಶ |
| ಚೌಥಾಯಿ | – | ಒಂದು ವಸ್ತುವಿನ ಕಾಲುಭಾಗ (೧/೪) |
| ಜೂಡಿ | – | ಕಂದಾಯ |
| ದಪ್ತರ | – | ಲೆಕ್ಕ ಪತ್ರ ಬರೆದಿಟ್ಟ ಪುಸ್ತಕ |
| ಪಟ್ಟಾ | – | ಹಕ್ಕು ಪತ್ರ |
| ಪರಗಣ | – | ಜಿಲ್ಲಾ ವಿಭಾಗ |
| ಪಾಳು ಮಣ್ಣು | – | ಹಾಳು ಮಣ್ಣು |
| ಪೋಟಗಿ | – | ಜೀವನ ನಿರ್ವಹಣೆಗಾಗಿ ನೀಡುವ ಅನುದಾನ |
| ಪೋಗದಿ | – | ಕಪ್ಪು ಕಾಣಿಕೆ |
| ಫರ್ಮಾನು | – | ರಾಜಾಜ್ಞೆ |
| ಮಾಫ್ | – | ಕ್ಷಮಿಸು |
| ಮೋಹರ್ | – | ಸಿಕ್ಕಾ, ಸೀಲು |
| ರಕಮು | – | ಬೆಲೆ |
| ಲಾಯ | – | ಕುದುರೆ ಕಟ್ಟುವ ಮನೆ |

# ವಿಷಯ ಕುರಿತು ಚರ್ಚಿಸಿದ ವಿದ್ವಾಂಸರುಗಳು

| | |
|---|---|
| ಡಾ॥ ವಿ.ಎಸ್. ಮಾಳಿ | ಹಾರೂಗೇರಿ. |
| ಡಾ॥ ಆರ್.ಬಿ. ಚಿಲುಮಿ | ಹಾರೂಗೇರಿ. |
| ಡಾ॥ ಮೋಹನ ಕೃಷ್ಣರೈ | ಕನ್ನಡ ವಿಶ್ವವಿದ್ಯಾಲಯ ಹಂಪಿ. |
| ಡಾ॥ ಸಂಗಮೇಶ ಕಲ್ಯಾಣಿ | ಮುದೋಳ. |
| ಡಾ॥ ಸಂಗಮೇಶ ಬಿರಾದಾರ | ಜಮಖಂಡಿ. |
| ಡಾ॥ ಶೇಖದಾರ | ಬಬಲೇಶ್ವರ. |
| ಡಾ॥ ಎಸ್. ಆರ್. ಚನ್ನವೀರಪ್ಪಾ | ಕನ್ನಡ ವಿಶ್ವವಿದ್ಯಾಲಯ ಹಂಪಿ. |
| ಡಾ॥ ಚಂದ್ರಶೇಖರ | ಕನ್ನಡ ವಿಶ್ವವಿದ್ಯಾಲಯ ಹಂಪಿ. |
| ಡಾ॥ ಕುಂಬಾರ | ಬೆಳಗಾವಿ. |



ಚಿತ್ರ -1

ವಾಡೆಯ ಹೆಬ್ಬಾಗಿಲು



ಚಿತ್ರ -2

ವಾಡೆಯ ಒಳಗಡೆ ದೇಸಾಯಿಯವರ ಮನೆ



ಚಿತ್ರ -3

ವಾಡೆಯಲ್ಲಿರುವ ದೇಸಾಯಿಯವರ ಆಡಳಿತದ ಕಚೇರಿ



ಚಿತ್ರ - 4

ಪಾಯಪ್ಪಾ ದೇಸಾಯಿ ಪತ್ನಿ ಕುಸುಮಾತಾಯಿಯೊಂದಿಗೆ



ಚಿತ್ರ -5

ಪಾಯಪ್ಪಾ, ದೇಸಾಯಿಯವರನ್ನು ದತ್ತಕ ಪಡೆದ ರುಕ್ಮೈನಿಬಾಯಿ



ಚಿತ್ರ -6

ಪಲ್ಲಕ್ಕಿ ವಿಜಯದಶಮಿ ಹಬ್ಬಕ್ಕಾಗಿ ತಯಾರಿಸಿಟ್ಟ



ಚಿತ್ರ - 7

ವಾಡೆಯಲ್ಲಿ ಜೈನ ಬಸದಿ



ಚಿತ್ರ - 8

ವಾಡೆಯಲ್ಲಿರುವ ಜೈನ ಬಸದಿ ಮಾಹಾವಿರನ ನಿಗ್ರಹ



ಚಿತ್ರ - 9

ವಾಡೆಯಲ್ಲಿರುವ ಮನಸ್ತಂಬ



ಚಿತ್ರ - 10

ವಾಡೆಯಲ್ಲಿರುವ ಭಾವಿ



ಚಿತ್ರ -11

ವಾಡೆಯಲ್ಲಿರುವ ಜೈಲು



ಚಿತ್ರ-12

ವಾಡೆಯಲ್ಲಿರುವ ಅಲ್ಲಮ ಪ್ರಭು ದೇವಾಲಯ



ಚಿತ್ರ -13

ಕಂಚಿನ ವಿಗ್ರಹ ತಯಾರಿಸುತ್ತಿರುವ ಶ್ರೀ ಕಾಂತ ಗೌರಿಮನೆ



ಚಿತ್ರ -14

ಕಂಚಿನಿಂದ ಮಾಡಿದ ಮೂರ್ತಿಗಳು



ಚಿತ್ರ -15

ವಾಡೆಯಲ್ಲಿರು ವಿವಿಧ ದೇವರ ವಿಗ್ರಹಗಳು

खासगी ]

जुने कागदपत्र

# देसाई परगणे तेरदळ

मुा हनगंडी

देहाये

| | |
|---|---|
| ता। तोरसाल | ता। मोर्डी |
| १ सेगुणसी | १ हारोगेरा |
| १ तमधडी | १ रसूलपूर |
| १ मादलमोटे | १ खंडदाल |
| १ कोलीगुड | १ मुगलखोड |
| १ कौटकोप | १ मूडलगी |
| १ दरूर | १ मुंडीगनहाल |
| १ इंगळगाऊ | १ गोलनबावी |
| १ खेमलापूर | १ पालनबावी |
| १ संकरहटी | १ इटीगनहाल |
| १ सप्तसागर | १ हंदीगुंद |
| १ सिदापूर | १ हलूर |
| १ गुंडीगवाड | १ येरगोटे |
| १ रेबकवा | १ कलनतिपी |
| १ तीर्थ | १ बेकोड |
| | १ सुलतानपूर |

---

बिदानंद सुरुसन सलास सितैन व अलफ ह्या बा। हक कृस्णगौडा फर्जंद जखगोंडा देसाई पा। मजकूर शकजादा होऊन बेदील जाहाले असता समजावीस बा। पेठ अथणीचे थलास मीया अजम मिया अबदुल कासीम फौजदार व गोमाजी विठल हवालदार व कारकून पा। मजकूर जाऊन सेख अजम सेख शेबगदुला हवालदार व कारकून पेठ मजकूर याचे गुजारतीने दिलासा करून साहेबाचे बंदगीस सीरणी कबूल कर-



वाऊन कौल मराहामत केले असे चावराना निसबत इनाम मौजे हिडकल रैयत दर चावरे १ होन कुलबाब कुलकानू गाव १
येणेप्रा। देसाई पा। मारास कौलू इनायत केले असे यापैकी चावराना कसबा व गावगना खालसात रयेत नि।। दर चावरे होनु १ प्रमाणे हक मराहामत केले असे देसाई मजकुरासी दुंमाला कीजे दर हर साला ताजा मिसेलीचे उजूर न करिता पिडी दर पिडी भोगवटा चालवीजे तालीक लेहोनु घेऊन असेल मिसाल देसाई मजकुरासी परतून दीजे मोर्तब (षट्‌कोनी फारसी मोर्तब सुद)
तेरीख २९ माहे जिल्हेज
जिल्हेज

---

ले. ३७. फ. १०७२ श. १५८४ भाद्रपद शु. १
इ. १६६२ आगष्ट ४

( सिका फारसी अष्टपैलू ) ( अ. कोनी सिका + ळप्र सन )

बें कौलनामा मीया अजम अकरम मिया अबदुल कासीम फौजदार
रुजू सुर माहालानिहाये व मा। गोमाजी विठल हवालदार व
नीस कारकून पा। तेरदळ ता। कृस्णगौडा फर्जंद जखगोडा
देसाई पा। मजकूर बिदानद सुरुसन सलास सितैन अलफ बाबे कौलनामा ऐसा जे तुझे समजाविसीबदल पेठ अथणीस आम्ही येउनु सेख अजम सेख सीबगदुला हवालदार व मा। वेंकाजी पंडित मजमूदार पेठ मा। याचे गुजारतीने तुझे निशां करितां तुवा आपला मुदा पेश केला की दरसाल वा इहिदे सीतैनामधे साहेबास पा। मजकूर मुकासा अर्जानी जाहालियावरी साहेबी आपणावरी नजर इनायेत फर्माउन कौल मराहामत केले जे फौजदार व हवालदारासी माहालीचे कुल आहवाल दखल करणे त्यास आपले जागा समजोन तेहि जे काये तुज कौल

# ಕಂಚುಗಾರರ ಕಲಾತ್ಮಕ ವಿಗ್ರಹ

- ಮ.ಕೃ ಮೇಗಾಡಿ



೫೦ ಕಿ.ಗ್ರಾಂ. ತೂಕದ ಮುಧೋಳದ ಶ್ರೀ ಬಸವೇಶ್ವರ ವಿಗ್ರಹ

ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕಿನ ಪುಟ್ಟ ಗ್ರಾಮ ಹನಗಂಡಿಯು ಹಲವು ವೈಶಿಷ್ಟ್ಯತೆಗಳಿಂದ ಕೂಡಿ ರಾಜ್ಯ ಹಾಗೂ ರಾಷ್ಟ್ರದ ಗಮನ ಸೆಳೆದಿದೆ. ೨೦೦ ವರ್ಷಗಳ ಇತಿಹಾಸ ಹೊಂದಿರುವ ದೇಸಾಯಿಯವರ ವಾಡೆ ಇಲ್ಲಿದೆ. ೬ ಸಾವಿರ ಜನಸಂಖ್ಯೆ ಹೊಂದಿರುವ ಹನಗಂಡಿಯಲ್ಲಿ ಗೌರಿಮನಿ ಹಾಗೂ ಲಾಳಿ ಎಂಬ ಅಡ್ಡ ಹೆಸರಿನ ೮-೧೦ ಮನೆಗಳಿವೆ. ಈ ಮನೆತನದವರು ಆರಂಭದಿಂದಲೂ ಮೂರ್ತಿ ತಯಾರಿಕೆಯನ್ನೇ ಮೂಲ ವೃತ್ತಿಯನ್ನಾಗಿಸಿಕೊಂಡು ಬಂದಿದ್ದಾರೆ. ಕಂಚು, ತಾಮ್ರ, ಹಿತ್ತಾಳೆ, ಬೆಳ್ಳಿ ಪಂಚಲೋಹಗಳಿಂದ ಆಕರ್ಷಕ ಮೂರ್ತಿ ತಯಾರಿಸುವ ಇವರನ್ನು ಕಂಚುಗಾರರು ಎಂದು ರೂಢಿಯಿಂದ ಕರೆಯುತ್ತಾರೆ.

ಹನಗಂಡಿಯ ಕಂಚುಗಾರರು ತಯಾರಿಸಿದ ನಾನಾ ತೆರನಾದ ಮೂರ್ತಿಗಳನ್ನು, ಸಂಗೀತ ಸಾಧನೆಗಳನ್ನು ಕರ್ನಾಟಕ ಅಷ್ಟೇ ಅಲ್ಲ ಮಹಾರಾಷ್ಟ್ರ, ಆಂಧ್ರಪ್ರದೇಶ, ದಿಲ್ಲಿ, ಉತ್ತರಪ್ರದೇಶ ಮುಂತಾದ ರಾಜ್ಯಗಳಿಗೂ ಮಾರಾಟ ಮಾಡಲು ಕಳುಹಿಸುತ್ತಿರುವುದರಿಂದ ಹನಗಂಡಿಯ ಮೂರ್ತಿ- ಗಳಿಗೆ ಹೆಸರು ಬಂದಿದೆ.

### ಇತಿಹಾಸ

ಮೂಲತಃ ಶ್ರೀ ಅಪ್ಪಣ್ಣ ನಿಂಗಪ್ಪ ಗೌರಿಮನಿ ಇವರಿಂದ ಕಂಚಿನ ಮೂರ್ತಿಗಳನ್ನು ತಯಾರಿಸುವ ಕಲೆ ಆರಂಭಗೊಂಡಿತು. ಇವರ ಮೊಮ್ಮಗನಾದ ತಲೆಮಾರಿನವರಾದ ನಿಂಗಪ್ಪ ಗೌರಿಮನಿಯವರೂ ಖ್ಯಾತ ತಯಾರಕರಾಗಿ ಹೆಸರು ಮಾಡಿದ್ದಾರೆ. ಗೌರಿ ಹಾಗೂ ಕಾಳಿಕಾದೇವಿಯ ಆರಾಧಕರಾದ ಇವರು ಶ್ರದ್ಧಾಭಕ್ತಿಯಿಂದ ಮೂರ್ತಿ ತಯಾರಿಸುವುದು ಅವಶ್ಯವೆಂದು ನಂಬಿದವರು. ಗೌರಿ ಹುಣ್ಣಿಮೆಯಲ್ಲಿ ೧೫ ದಿನಗಳವರೆಗೆ ಗೌರಮ್ಮ ತಾಯಿ ಉತ್ಸವ ಜರುಗುತ್ತ ಬಂದಿರುವ ಇವರನ್ನು ಗೌರಿಮನೆಯವರು ಎಂದು ಕರೆಯುವುದು ರೂಢಿಯಾಗಿದೆ.

ಬಾದಾಮಿ ಶ್ರೀ ಬನಶಂಕರಿಯ ಬೆಳ್ಳಿಯ ಉತ್ಸವ ಮೂರ್ತಿ, ಜಮಖಂಡಿ ಶ್ರೀ ಧರೆಪ್ಪ ಧರಿದೇವರ ೧೫ ಕೆ. ಜಿ. ಕುದುರೆ ಮೂರ್ತಿ, ಮುಧೋಳ ಶ್ರೀ ಬಸವೇಶ್ವರರ ೫೦ ಕೆ.ಜಿ. ಮೂರ್ತಿ, ಸಂತಿಯ ಶ್ರೀ ಗುರುದೇವ ಬ್ರಹ್ಮಾನಂದ ಶಿವಯೋಗಿಗಳ ಆಶ್ರಮದಲ್ಲಿರುವ ೧೦೦ ಕೆ. ಜಿ. ಘಂಟೆ, ತೇರದಾಳದ ಕ್ಷೇತ್ರಾಧಿಪತಿ ಶ್ರೀ ಅಲ್ಲಮಪ್ರಭು ಬೃಹನ್ಮಠದ ೭೦ ಕೆ.ಜಿ. ಘಂಟೆ, ಸುಕ್ಷೇತ್ರ ಮುಗಳಖೋಡ ಶ್ರೀ ಯಲ್ಲಾಲಿಂಗ ಪ್ರಭು ಮಹಾರಾಜರ ಸಮಾಧಿ ಮಂದಿರದ ಮೇಲಿನ ಕಳಸ, ೪೫ ಕೆ. ಜಿ. ತೂಕದ ಪಂಚಲೋಹದ ಪಲ್ಲಕ್ಕಿ, ಮುಸ್ಲಿಂ ಬಾಂಧವರು ಮೊಹರಂ ಹಬ್ಬದಲ್ಲಿ ಮೆರವಣಿಗೆ ಮಾಡುವ ಅಲಾಬ್, ಶ್ರೀ ಲಕ್ಷ್ಮಿ, ಶ್ರೀ ಸರಸ್ವತಿ, ಶ್ರೀ ಗಣೇಶ, ಶ್ರೀ ವೀರಭದ್ರೇಶ್ವರ, ಶ್ರೀ ಬಸವಣ್ಣ, ಶ್ರೀ ಹನುಮಾನ, ನಟರಾಜ ಹೀಗೆ ವಿವಿಧ





ಕಂಚುಗಾರರು ನಿರ್ಮಿಸಿದ ವಿವಿಧ ಮೂರ್ತಿಗಳು

ಮೇಲೆ ತೆಳುವಾದ ಮೇಣದ ಲೇಪನ ಮಾಡುವರು. ಅದಕ್ಕೆ ಪಟ್ಟಿ ತಂತಿ ಬಿಗಿದು ಕಟ್ಟಿ ಮತ್ತೇ ಮಣ್ಣು ಬಡಿಯುವರು. ಮೂರ್ತಿಯ ಕೆಳ ಭಾಗದಲ್ಲಿ ಒಂದು ಚಿಕ್ಕರಂಧ್ರ ಬಿಡುವರು. ಹೀಗೆ ನಿರ್ಮಾಣಗೊಂಡ ಕಚ್ಚಾ ಮೂರ್ತಿಯನ್ನು ಬಿಸಿಲಿನಲ್ಲಿ ಒಣಗಿಸುತ್ತಾರೆ. ನಂತರ ಒಂದು ಕೆ.ಜಿ.ಗೆ ನೂರು ಸೆಗಣಿಯ ಕುರುಳು (ಕುಳ್ಳು)ಗಳನ್ನು ಹಾಕಿ ಸುಡುತ್ತಾರೆ. ಆಗ ಮೂರ್ತಿಯೊಳಗಿರುವ ಎಲ್ಲಾ ಮೇಣವು ಶಾಖದಿಂದ ಕರಗಿ ರಂಧ್ರದ ಮೂಲಕ ಹೊರಬರುವುದು. ಈಗ ಒಳಗಿರುವ ಜೇಡಿಮಣ್ಣಿನ ಮೂರ್ತಿ ಹಾಗೂ ಹೊರಗೆ ಲೇಪಿಸಿರುವ ಜೇಡಿಮಣ್ಣಿನ ನಡುವೆ ಮೇಣದಲ್ಲಿ ತಯಾರಿಸಿದ ಪಡಿಯಚ್ಚು ಒಳಗೇನೆ (ಒಳಗಡೆಯೇ) ಉಳಿಯುತ್ತದೆ. ಕಂಚುಗಾರರು ಒಂದು ಮೂಸೆಯಲ್ಲಿ ಹಿತ್ತಾಳೆ ಅಥವಾ ತಾಮ್ರವನ್ನು ಕರಗಿಸುತ್ತಾರೆ. ಬಿಟ್ಟಿರುವ ರಂಧ್ರದ ಮೂಲಕ ಈ ದ್ರವವನ್ನು ಹಾಕುತ್ತಾರೆ. ಈ ದ್ರವವು ಒಳಗಿರುವ ಮೂರ್ತಿಯ ಪಡಿಯಚ್ಚಿನಲ್ಲಿ ಗಟ್ಟಿಯಾಗಿ ಸೇರಿಕೊಂಡು ನಿಜವಾದ ಮೂರ್ತಿ ತಯಾರಾಗುತ್ತದೆ. ಮೂರ್ತಿಯ ಮೇಲಿನ ಜೇಡಿಮಣ್ಣು ತೆಗೆದು ಕಂಚುಗಾರರು ಉಳಿಯಿಂದ ಮೂರ್ತಿ ಕೆತ್ತಿ ಸುಂದರಗೊಳಿಸುತ್ತಾರೆ. ನಂತರ ಪಾಲೀಶ್ ಮಾಡಿದಾಗ ಥಳಥಳನೆ ಹೊಳೆಯುವ ಮೂರ್ತಿಗಳು ಕಣ್ಮನ ಸೆಳೆಯುವವು!

ಈ ಮೂರ್ತಿ ತಯಾರಿಕೆಗೆ ಬೇಸಿಗೆ ಕಾಲ ಹಾಗೂ ಚಳಿಗಾಲ ಸೂಕ್ತವಾಗಿರುತ್ತದೆ. ಮಳೆಗಾಲದಲ್ಲಿ ಮೂರ್ತಿ ತಯಾರಿಕೆ ಕ್ಲಿಷ್ಟಕರ ಎಂದು ಕಂಚುಗಾರರ ಅಭಿಪ್ರಾಯವಾಗಿದೆ.

### ಮಾರುಕಟ್ಟೆ ವ್ಯಾಪ್ತಿ

ಕಂಚುಗಾರರು ತಯಾರಿಸಿದ ಮೂರ್ತಿಗಳ ತೂಕದ ಅನುಗುಣವಾಗಿ ಬೆಲೆ ನಿಗದಿಪಡಿಸಿ ಮಾರಾಟ ಮಾಡಲಾಗುತ್ತಿದೆ. ಕನಿಷ್ಠ ೪.೫೦ ರಿಂದ ಆರಂಭಗೊಂಡು ಸಾವಿರಾರು ರೂಪಾಯಿಗಳವರೆಗೆ ಮೂರ್ತಿ ಮಾರಾಟ ಮಾಡುವರು. ಕಂಚುಗಾರರು ತಾವು ತಯಾರಿಸಿದ ಮೂರ್ತಿಗಳನ್ನು ಮಾರಾಟ ಮಾಡಲು ಅಂಗಡಿಗಳಿಲ್ಲ, ಮಾರುಕಟ್ಟೆ ಇಲ್ಲ. ಮೂರ್ತಿಗಳು ಬೇಕಾದವರು ಹನಗಂಡಿ ಗ್ರಾಮಕ್ಕೆ ಬರಬೇಕು ತಮಗೆ ಬೇಕಾದ ಮೂರ್ತಿಯ ಚಿತ್ರವನ್ನೋ ಅಥವಾ ಹಳೆಯ ಮೂರ್ತಿ ತಂದುಕೊಟ್ಟರೆ ಅವರು ತಿಳಿಸಿದ ಪ್ರಕಾರ ಆಕಾರ, ಗಾತ್ರ, ಎತ್ತರವನ್ನು ಗಮನದಲ್ಲಿರಿಸಿ ಮೂರ್ತಿ ತಯಾರಿಸುವರು.

### ಮೂರ್ತಿ ತಯಾರಕರ ಸಮಸ್ಯೆಗಳು

ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ಹನಗಂಡಿ ಕಂಚುಗಾರರು ಬಡತನದ ಬೇಗೆಯಿಂದ ಹೊರಬಾರದೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆಕರ್ಷಕ ಮೂರ್ತಿಗಳನ್ನು ತಯಾರಿಸಿ, ಎಲ್ಲರ ಮನಗೆಲ್ಲುವ ಕಂಚುಗಾರರು ಕಲೆಯಿಂದ ಹಿಂಬಾಲಿಸಿದರೂ ಚಿಕ್ಕ ಮನೆ, ದೊಡ್ಡ ಸಂಸಾರ! ದುಡಿದದ್ದು ಹೊಟ್ಟೆಬಟ್ಟೆಗೂ ಸಾಲದು. ಮೂರ್ತಿ ತಯಾರಿಕೆಯಲ್ಲಿ ವೈಜ್ಞಾನಿಕ ಪದ್ಧತಿ ಅಳವಡಿಸಿಕೊಳ್ಳುವ ಆರ್ಥಿಕ ಸ್ಥಿತಿ ಕಂಚುಗಾರರಿಗಿಲ್ಲ, ಕಾರ್ಯಾಗಾರಗಳಿಲ್ಲ, ಸರ್ಕಾರದಿಂದ ಯಾವುದೇ ಸಹಾಯ ಸಹಕಾರ ಸಿಗುತ್ತಿಲ್ಲ, ಕಂಚುಗಾರರು ಇಷ್ಟು ಹಿಂದುಳಿಯಲು ಐಕ್ಯತೆಯ ಕೊರತೆ ಎದ್ದು ಕಾಣುವುದು. ಸಂಘಟನಾ ಶಕ್ತಿಯಿರದ ಸಮಸ್ಯೆಗಳ ತಾಕಲಾಟದಲ್ಲಿ ಹಾಗೋ ಹೀಗೋ ಬದುಕು ಸವೆಸುತ್ತಿರುವ ಕಂಚುಗಾರರಿಗೆ ರಾಜ್ಯ ಹಾಗೂ ಕೇಂದ್ರ ಸರಕಾರಗಳಿಂದ ಆರ್ಥಿಕ ಸಹಕಾರ ಸಿಕ್ಕರೆ ಮುಂದೊಂದು ದಿನ ಖಂಡಿತವಾಗಿಯೂ ಒಳ್ಳೆಯ ಸಾಧನೆ ಮಾಡಿ ನಾಡಿಗೆ ಹೆಸರು ತರುವುದರಲ್ಲಿ ಸಂದೇಹವಿಲ್ಲ, ಇವರ ಮೂರ್ತಿ ಕಲಾ ಬೆಳವಣಿಗೆಗೆ ಸರ್ಕಾರ, ಸಮಾಜ, ಜೊತೆಗೆ ಸಂಘ-ಸಂಸ್ಥೆಗಳು, ವೇದಿಕೆಗಳು, ಸಂಘಟನೆಗಳು ಕಂಚುಗಾರರನ್ನು ಗುರುತಿಸಿ ಪ್ರೋತ್ಸಾಹಿಸುವುದು ಇಂದು ಅವಶ್ಯಕವಾಗಿದೆ.



